# ವಿಶ್ವ ವಿದ್ಯಾಲಯ




## ವಿಶ್ವ ವಿದ್ಯಾಲಯ

ಗ್ರಂಥಕರ್ತ : ತ್ರಿಮತ ಐಕ್ಯೈಕ ಗುರುವು

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (89) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

www.thraithashakam.org





# ವಿಶ್ವ ವಿದ್ಯಾಲಯ


<u>ಗ್ರಂಥಕರ್ತ</u>

**ತ್ರಿಮತ ಏಕೈಕ ಗುರುವು**

ಆಧ್ಯಾತ್ಮಿಕ ಸಾಮ್ರಾಜ್ಯ ಚಕ್ರವರ್ತಿ, (80) ದಶ ಸಪ್ತಾಧಿಕ ಗ್ರಂಥಕರ್ತ

ಇಂದೂ ಜ್ಞಾನ ಧರ್ಮಪ್ರದಾತ, ಸಂಚಲನಾತ್ಮಕ ರಚಯಿತ, ತ್ರೈತ ಸಿದ್ಧಾಂತ ಆದಿಕರ್ತ

**ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು**

---

ತೆಲುಗುನಿಂದ ಕನ್ನಡಕ್ಕೆ ಅನುವಾದ

**ಇಂದೂಶ್ರೀ ಕವಿತ, ಇಂದೂಶ್ರೀ ಶ್ರೀದೇವಿ**


---





<u>ಗ್ರಂಥ ಮುದ್ರಣ</u>

**ಇಂದೂ ಜ್ಞಾನ ವೇದಿಕೆ** (Regd. No : 168/2004)

(Estd. in 1978 - Regd.No.: 168/2004)

ತ್ರೈತ ಶಕ : 38 ಪ್ರಥಮ ಮುದ್ರಣ : ಅಕ್ಟೋಬರ್–2016

ಪ್ರತಿಗಳು : 1000 **ಬೆಲೆ. 50/–**

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

01. ತ್ರೈತ ಸಿದ್ಧಾಂತ ಭಗವದ್ಗೀತೆ.
02. ಆಧ್ಯಾತ್ಮಿಕ ಪ್ರಶ್ನೆ–ಉತ್ತರಗಳು.
03. ಧರ್ಮ–ಅಧರ್ಮ.
04. ಇಂದೂತ್ವವನ್ನು ಕಾಪಾಡೋಣ.
05. ಯಜ್ಞಗಳು (ಸತ್ಯವಾ–ಅಸತ್ಯವಾ?)
06. ದೆವ್ವಗಳಹಾಗೂ–ಭೂತಗಳ ಯಥಾರ್ಥಸಂಘಟನೆಗಳು.
07. ಸತ್ಯಾನ್ವೇಷಣಾ ಕಥೆ.
08. ಮಂತ್ರ–ಮಹಿಮೆ (ಸತ್ಯವಾ–ಅಸತ್ಯವಾ)
09. ಶ್ರೀ ಕೃಷ್ಣನು ದೇವರಾ, ಭಗವಂತನಾ.
10. ಗೀತಾ ಪರಿಚಯ.
11. ಕಲಿಯುಗ (ಎಂದಿಗೂ ಯುಗಾಂತವಲ್ಲ).
12. ಜನನ ಮರಣ ಸಿದ್ಧಾಂತ.
13. ಮರಣ ರಹಸ್ಯ.
14. ಪುನರ್ಜನ್ಮ ರಹಸ್ಯ.
15. ತ್ರೈತಾಕಾರ ರಹಸ್ಯ (ತ್ರೈತಾಕಾರ ಬೆರ್ಮುಡಾ).
16. ಕಥೆಗಳ ಜ್ಞಾನ.
17. ಗಾದೆಗಳ ಜ್ಞಾನ.
18. ಒಗಟುಗಳಲ್ಲಿ ಜ್ಞಾನ.
19. ತತ್ತ್ವಗಳ ಜ್ಞಾನ.
20. ಬೈಗುಳಲ್ಲಿ ಜ್ಞಾನ– ಆಶೀರ್ವಾದಗಳಲ್ಲಿ ಅಜ್ಞಾನ.
21. ಗೀತಂ–ಗೀತ (ಹಾಡುಗಳ ಜ್ಞಾನ).
22. ತತ್ತ್ವಾರ್ಥ ಗೊಂಬೆಗಳ ಜ್ಞಾನ.
23. ದೇವಾಲಯ ರಹಸ್ಯಗಳು.
24. ಇಂದೂ ಸಂಪ್ರದಾಯಗಳು.
25. ನಮ್ಮ ಹಬ್ಬಗಳು. (ಹೇಗೆ ಮಾಡಬೇಕೋ ತಿಳಿದಿದೆಯಾ?)
26. ಜ್ಯೋತಿಷ್ಯಶಾಸ್ತ್ರ (ಶಾಸ್ತ್ರವಾ–ಅಶಾಸ್ತ್ರವಾ?)
27. ತಾಯಿ ತಂದೆ.
28. ಗುರುಪ್ರಾರ್ಥನಾಮಂಜರಿ.
29. ತ್ರೈತಾರಾಧನೆ.
30. ಸಮಾಧಿ.
31. ಪ್ರಬೋಧ.
32. ಸುಬೋಧ.
33. ಪ್ರಸಿದ್ಧ ಬೋಧನೆ.
34. ಸುಪ್ರಸಿದ್ಧಬೋಧನೆ.
35. ಸಿಲುಬೆ ದೇವರಾ?
36. ಮತಾತೀತ ದೇವರ ಮಾರ್ಗ.
37. ದೇವರ ಗುರುತು–963.
38. ಮತ–ಪಥ.
39. ಪ್ರಬೋಧಾನಂದ ನಾಟಕಗಳು.
40. ಇಂದೂ ಕ್ರೈಸ್ತವನಾ?
41. ನಿಗೂಢ ತತ್ತ್ವಾರ್ಥ ಬೋಧಿನಿ.
42. ಆತ್ಮ ಲಿಂಗಾರ್ಥ.
43. ನಾಸ್ತಿಕರು–ಆಸ್ತಿಕರು.
44. ಹೇತುವಾದ–ಪ್ರತಿವಾದ.
45. ಗುತ್ತಾ.
46. ಪ್ರಬೋಧ ತರಂಗಗಳು.
47. ತ್ರೈತ ಸಿದ್ಧಾಂತ.
48. ರೂಪ ಬದಲಾದ ಗೀತೆ.
49. ಉಪನಿಷತ್‌ಗಳಲ್ಲಿ ಲೋಪಗಳು.
50. ಪ್ರಥಮ ದೈವಗ್ರಂಥ ಭಗವದ್ಗೀತೆ.
51. ದ್ರಾವಿಡ ಬ್ರಾಹ್ಮಣ.
52. ತೀರ್ಪು.
53. ಕರ್ಮಪತ್ರ.
54. ಪ್ರವಕ್ತರು ಯಾರು?
55. ಧರ್ಮಶಾಸ್ತ್ರ ಯಾವುದು?
56. ಮತಾಂತರ ದೈವದ್ರೋಹ.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ರಚನೆಗಳು

## ಇಂದೂ ಜ್ಞಾನವೇದಿಕೆ ಪ್ರಕಟಣೆಗಳು

57. ತ್ರೈತಶಕ ಪಂಚಾಂಗ.
58. ತ್ರೈತ ಸಿದ್ಧಾಂತ ಆಧ್ಯಾತ್ಮಿಕ ಘಂಟು.
59. ಜೀಹಾದ್ ಎಂದರೇ ಯುದ್ಧವಾ?
60. ಮೂರು ಗ್ರಂಥಗಳು, ಇಬ್ಬರು ಗುರುಗಳು.
61. ದೇವರ ಜ್ಞಾನ ಕಬ್ಜಾ ಆಗಿದೆ.
62. ಅಜ್ಞಾನದಲ್ಲಿ ಉಗ್ರವಾದ ಬೀಜಗಳು.
63. ವಾರ್ತಕನು–ವರ್ತಕನು.
64. ದೇವರ ಚಿಹ್ನೆ.
65 ಯಾವುದು ನಿಜವಾದ ಜ್ಞಾನ?
66. ಪ್ರತಿಮೆ X ವಿಗ್ರಹ – ದೈವ X ದೆವ್ವ.
67. ಮರಣದ ನಂತರ ಜೀವನ.
68. ಯಾವ ಮತದಲ್ಲಿ ಎಷ್ಟು ಮತ ದ್ವೇಷ.
69. ಸ್ವರ್ಗ ಇಂದ್ರಲೋಕವಾ! ನರಕ ಯಮರಾಜ್ಯವಾ!!
70. ಮಧ್ಯಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
71. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು.
72. ಅಂತಿಮ ದೈವಗ್ರಂಥದಲ್ಲಿ ಜ್ಞಾನವಾಕ್ಯಗಳು (ಎರಡನೇ ಭಾಗ)
73. ಹಿಂದೂ ಮತದಲ್ಲಿ ಸಿದ್ಧಾಂತಕರ್ತರು.
74. ಒಂದು ಮಾತು ಮೂರು ಗ್ರಂಥಗಳು.
75. ಲೂ ಎಂದರೇ ಏನು? (ತೆಲುಗು)
76. ಆದಿತ್ಯ.
77. ಗಿಡ ಮೊದಲಾ! ಬೀಜ ಮೊದಲಾ?
78. ಒಬ್ಬನೇ ಇಬ್ಬರು.
79. ಸಾಯಿಬಾಬಾ ದೇವರಾ! ಅಲ್ಲವಾ!
80. ಯೇಸು ಮರಣಿಸಿದ್ದಾನಾ? ಹತವಾಗಿದ್ದಾನಾ?
81. ದೇವರ ಆಗಮನಕ್ಕೆ ಇದು ಸಮಯವಲ್ಲವೇ!
82. ವಿಶ್ವ ವಿದ್ಯಾಲಯ
83. ಕೃಷ್ಣ ಮೂಸ (ಶ್ರೀ ಕೃಷ್ಣ ಮರಣದ ನಂತರ ಜೀವನ)
84. ಒರೆಗಲ್ಲು (ಗೀಟುರಾಯಿ)
85. ಮೂರು ದೈವ ಗ್ರಂಥಗಳು–ಮೂರು ಪ್ರಥಮ ವಾಕ್ಯಗಳು
86. ಹೇತುವಾದ ಪ್ರಶ್ನೆಗಳು–ಸತ್ಯವಾದ ಉತ್ತರಗಳು
87. ದೈವಗ್ರಂಥಗಳಲ್ಲಿ ಸತ್ಯಾಸತ್ಯ ವಿಚಕ್ಷಣೆ



04
# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

01. ಸಂತಕಮು.
02. ಸಾಂಪ್ರದಾಯಮು.
03. ತ್ರೈತಶಕಮು.
04. ಕೋಡಿಪುಂಜು–ಪಾದರಸಮು.
05. ಯುಗಮು–ಯೋಗಮು.
06. ನೈಜಂ–ಸಹಜಂ.
07. ಆತ್ಮಕು ವೆಂಟ್ರುಕ ಗುರ್ತು.
08. ಪೈತ್ಯಂ–ಸೈತ್ಯಂ.
09. ಶೈವಮು–ವೈಷ್ಣವಮು.
10. ಇಂದೂಮಹಾಸಮುದ್ರಂ.
11. ಸೃಷ್ಠಿ–ಸೃಷ್ಠಿಕರ್ತ.
12. ಕಾಯ–ಪಂಡು–ಕಾಯ.
13. ಜ್ಞಾನಮು–ವಿಜ್ಞಾನಮು.
14. ವಾರ–ಮಾಸ–ವತ್ಸರ.
15. ಸೇಕೂವಲಿ–ಕೂಲಿಸೇವಾ.
16. ಧರ್ಮಮು–ಅಧರ್ಮಮು.
17. ಏಕ್‌ನಿರಂಜನ್–ಅಲಕ್‌ನಿರಂಜನ್.
18. ಗುರುವುಲೇನಿವಿದ್ಯ–ಗ್ರುಡ್ಡಿವಿದ್ಯ.
19. ಬಟ್ಟತಲ.
20. ಭಗವಂತುಡು.
21. ದ್ರಾವಿಡುಲು – ಆರ್ಯುಲು.
22. ಪ್ರಭುವು – ಪ್ರಭುತ್ವಂ.
23. ಭೂತಂ – ಮಹಾಭೂತಂ.
24. ಪ್ರಭು – ಪ್ರಜ.
25. ಯಾದವ್.
26. ಪುಸ್ತಕಮು–ಗ್ರಂಥಮು.
27. ವೆಲುಗುಬಂಟು.
28. ಪ್ರಕೃತಿ–ವಿಕೃತಿ.
29. ಮಾಟ–ಮಂದು.
30. ಏಕತ–ಏಕಾಗ್ರತ.
31. ಹರಿಕಾಲು–ಹರಿಚೇಯಿ.
32. ಪುಟ್ಟಗೋಸಿ–ಮೊಲತ್ರಾಡು.
33. 1 2 3 ಗುರುಪೌರ್ಣಮಿ.
34. ಚಮತ್ಕಾರ–ಆತ್ಮ.
35. ಕ್ಷಮಿಂಚರಾನಿ ಪಾಪಮು.
36. ಮಾಯಕುಡು–
    ಅಮಾಯಕುಡು.
37. ಮರಣಮು–ಶರೀರಮು.
38. ದ್ವಿತೀಯುಡು–ದ್ವಿತೀಯುಡು.
39. ಎದಮೀದಮುದ್ರ–
    ತಲ್ಲಿ ತಂಡ್ರಿ ಗುರ್ತು.
40. ಸೇವಾಶಾತಮು.
41. ಬಯಟಿ ಸಮಾಜಂ–
    ಲೋಪಲಿ ಸಮಾಜಂ.
42. ಶ್ರೀಕೃಷ್ಣಾಷ್ಟಮಿ.
43. ಪ್ರಪಂಚ ಶ್ರದ್ಧ–
    ಪರಮಾತ್ಮ ಶ್ರದ್ಧ.
44. ತಲ್ಲಿ ತಂಡ್ರಿ
45. ದೇವುನಿ ಜ್ಞಾನಮು–
    ಮಾಯ ಮಹತ್ಯಮು.
46. ಸಮಾಧಿ.
47. ತಲ್ಲಿ ತಂಡ್ರಿ –
    ಗುರುವು ದೈವಮು.
48. ಕಲಿಯುಗಮು.
49. ಮತಮು–ಪಥಮು.
50. ದಿವ್ಯಖುರಾನ್–ಹದೀಸು.
51. ತಲ್ಲಿ.
52. ಪುಟ್ಟುಟ – ಗಿಟ್ಟುಟ.
53. ಗೋರು – ಗುರು.
54. ಆತ್ಮ.
55. ಕರ್ಮ ಮರ್ಮಮು.
56. ತಾತ.
57. ಗುರುಪೌರ್ಣಮಿ.
58. ಯೋಗೀಶ್ವರುಲ
    ಜನ್ಮದಿನ ಸಂದೇಶಮು.
59. ಶ್ರೀಕೃಷ್ಣಜನ್ಮ ಮಧುರ.
60. ಇಂದುವು – ಹಿಂದುವು.
61. ಸ್ತ್ರೀ–ಪು/ಲಿಂಗಮು.

# ಯೋಗೀಶ್ವರರ ಸಂಚಲನಾತ್ಮಕ ತ್ರಿಮತ ಆಧ್ಯಾತ್ಮಿಕ ತೆಲುಗು ಪ್ರಸಂಗಗಳು

**DVD's**

62. ಆತ್ಮಪನಿ.
63. ತ್ರೈತ ಸಿದ್ಧಾಂತಮು.
64. ದೇಶಂ ಮೋಸಂ - ದೇಹಂ ಮೋಹಂ.
65. ಜೀರ್ಣ+ಆಶಯಮು.
66. ಮೇಘಂ ಒಕಭೂತಂ- ರೋಗಂ ಒಕಭೂತಂ.
67. ದೇವುನಿಕಿ ಮತಮುನ್ನದಾ?
68. ಸಹಜ ಮರಣಂ-ತಾತ್ಕಾಲಿಕ ಮರಣಂ
69. ಅಧರ್ಮ ಆರಾಧನಲು.
70. ಏದಿ ಧರ್ಮಮು.
71. ನಿದರ್ಶ - ನಿರೂಪ.
72. ಪುಟ್ಟಿನರೋಜು ಎವ್ವರಿಕೀ ರಾದು.
73. ನಟಿಂಚೇ ಆತ್ಮ.
74. ಮೂಡು ಪುಟ್ಟುಕಲು- ರೆಂಡು ಜಾಗಾಲು.
75. ಶ್ರೀ ಕೃಷ್ಣುಡು ಎವರು?
76. ಸಂಚಿತ ಕರ್ಮ.
77. ಗುರುವು ಎವರು?
78. ಕರ್ಮಲೇನಿ ಕೃಷ್ಣುಡು- ಕರ್ಮಉನ್ನ ಕೃಷ್ಣುಡು.
79. ಭಯಂ.
80. ಸುಖಮು-ಆನಂದಮು.
81. ದಶ-ದಿಶಲು.
82. ಆಡಿಂಚೇ ಆತ್ಮ.
83. ಇಚ್ಛಾಧೀನ ಕಾರ್ಯಮುಲು- ಅನಿಚ್ಛಾಧೀನ ಕಾರ್ಯಮುಲು.
84. ಟಕ್ಕುಟಮಾರಾ, ಇಂದ್ರಜಾಲ ಮಹೇಂದ್ರಜಾಲ, ಗಜಕರ್ಣ ಗೋಕರ್ಣ.
85. ಸ್ವಾರ್ಥ ರಾಜಕೀಯಂ (ಸ್ವ+ಅರ್ಥ ರಾಜಕೀಯಂ).
86. ಮೂಡು ನಿರ್ಮಾಣಾಲು-ಒಕ ಪರಿಶುಭ್ರತ.
87. ಏದಿ ಶಾಸ್ತ್ರಮು?
88. ತೆಲುಗುಲೋ ಮೂಡು- ಆರು-ತೊಮ್ಮಿದಿ
89. 6-3=6
90. ಗುರ್ತಿಂಪಬಡನಿವಾಡು ಗುರುವು.
91. ಜ್ಞಾನಮು ದಗ್ಗರ ಜಾಗ್ರತ್ತ!
92. ಚಂದ್ರಾಕಾರಮು (ಬಟ್ಟತಲ).
93. ಮತಮುಲಲೋ ಪವಿತ್ರ ಯುದ್ಧಮು.
94. ಮೂಡು ಗ್ರಂಥಮುಲು.
95. ಏಡು ಆಕಾಶಮುಲು.
96. ದೈವಗ್ರಂಥಮು.
97. ಜ್ಞಾನಮು ಕಬ್ಜಾ ಅಯ್ಯಿಂದಿ.
98. ಭಕ್ತಿ-ಭಯಮು.
99. ಜ್ಞಾನಶಕ್ತಿ.
100. ಕಾಲಜ್ಞಾನ ವಾಕ್ಯಮುಲು.
101. ಅರ್ಥಮು-ಅಪಾರ್ಥಮು.
102. ತೋಲೇವಾಡು.
103. ಗುರು ಚಿಹ್ನಂ.
104. ಭಕ್ತಿ-ಶ್ರದ್ಧಲು.
105. ದೇವುಡು ಇದ್ದರಾ! ಒಕ್ಕರಾ!!
106. ಪುರುಷೋತ್ತಮ.
107. ಮತದ್ವೇಷಮು.
108. ನೀ ವೆನುಕ ವಾಡು.
109. ಗ್ರಂಥಮು - ಬೋಧ.
110. ಆಟ – ದೋಬೂಚುಲಾಟ.
111. ಪ್ರಜಲು – ಮಾನವುಲು.
112. ಆಸ್ತಿ – ದೋಸ್ತಿ
113. ದಂತಮು-ಅಂತಮು.
114. ಮಾಯ ಮರ್ಮಮು-ಆತ್ಮ ಧರ್ಮಮು
115. ಶ್ರೀಕೃಷ್ಣುಡು ಚನಿಪೋಯಾಡಾ? ಚಂಪಬಡ್ಡಾಡಾ?
116. ಅಂತಿಮ ದೈವಗ್ರಂಥಮುಲೋ ಪ್ರಥಮವಾಕ್ಯಮುಲು
117. ಅದುರು-ಬೆದುರು
118. ಆಧ್ಯಾತ್ಮಿಕ ಪ್ರಶ್ನಲು-ಜವಾಬುಲು.

**ಸೂಚನೆ :** ತೆಲುಗಿನಿಂದ ಕನ್ನಡಕ್ಕೆ ಅನುವಾದಿಸಲಾಗದ ಪದಗಳು ಹಾಗೆಯೇ ಮುದ್ರಿಸಲಾಗಿದೆ.

# ಇಂದೂ ಜ್ಞಾನವೇದಿಕೆ ಪುಸ್ತಕಗಳು ದೊರೆಯುವ ವಿಳಾಸ

## ಪ್ರಬೋಧಾಶ್ರಮ (ಶ್ರೀ ಕೃಷ್ಣಮಂದಿರ)

ಚಿನ್ನಪೊಡಮಲ (ಗ್ರಾ), ತಾಡಿಪತ್ರಿ (ಮಂ), ಅನಂತಪುರಂ (ಜಿಲ್ಲೆ). A.P

Cell : **ಲಕ್ಷ್ಮಿನಾರಾಯಣಾಚಾರಿ**–09440556968. **ವೆಂಕಟೇಶ್**–08096816963.

(ಇಂದೂ ಜ್ಞಾನ ವೇದಿಕೆ ಸದಸ್ಯರು)

**ಎ. ರಾಘವೇಂದ್ರ ಶ್ರೇಷ್ಠಿ**
ಹೊಸಪೇಟೆ, ಬಳ್ಳಾರಿ (ಜಿಲ್ಲೆ). K. A
Cell : 9611133635,
9731816452, 09440645005

**ಜಿ. ರಾಧಾಕೃಷ್ಣಾ ರೆಡ್ಡಿ**
ಪ್ರಬೋಧಾ ನಿಲಯ. ರಿಂಗ್ ರೋಡ್,
ಮರಲೂರು, ತುಮಕೂರು (ಜಿ).
ಪಿನ್–572150, Cell : 9448177812

**ಶಿವರಾಜ**
(ಸಾ)(ಕಿ) ಕುಕನೂರು, ಚಿಕ್ಕಸೂಗುರು (ತಾ),
ರಾಯಚೂರು (ಜಿ), Cell:98443 69516

**R.S. ವೀರಾಚಾರಿ**
ಕತ್ತರಗುಪ್ಪೆ, ಬೆಂಗಳೂರು–560085
Cell : 9036892829

**G. ಮನೋಹರ್**
ಮಲ್ಲಸಂದ್ರ, ಟಿ. ದಾಸರಹಳ್ಳಿ
ಬೆಂಗಳೂರು–560057
Cell : 7411459912, 9448452963.

**B. ವಾತ್ಸಲ್ಯ**
ರೈಲ್ವೇ ಸ್ಟೇಷನ್ ಹತ್ತಿರ,
ಪಿ.ಬಿ.ರೋಡ್, ದಾವಣಗೆರೆ–577002
Cell : 9901534677, 8880666529

**ಯೋಗೇಶ್**.B
ವಡ್ಡೇಪಾಲ್ಯಂ (ಗ್ರಾ),
ಕುಂದುರ್ಪಿ(ಮಂ),ಅನಂತಪುರ(ಜಿಲ್ಲಾ)
ಸೆಲ್: 9620193341, 9739228639

**ಬಸವರಾಜ ಅಂಗಡಿ**
(ಸಾ) ಪೋತ್ನಾಳ, (ತಾ) ಮಾನವಿ,
ರಾಯಚೂರು (ಜಿ)
Cell : 9632418716

**ಸೂರ್ಯ ಪ್ರಕಾಶ**
ಟೈಪ್ 'ಸಿ' (ಸಾ) (ಪೊ) ಶಕ್ತಿನಗರ
(ತಾ), ರಾಯಚೂರು (ಜಿ)
Cell : 9611183107, 9164886981

**ಲೀಲಾವತಿ**
ಜನತಾ ನಗರ, ತೊಣಚಿಕೊಪ್ಪಲ್,
ಮೈಸೂರ್–547097
Cell : 9141109799, 9986369118

**T.V. ರಮಣ**
ಓಉಖ ಲೇಔಟ್, ರೂಪೇನಾ
ಅಗ್ರಹಾರ, ಬೆಂಗಳೂರು–560068.
Cell : 08970772028, 07411459912, 07406039453

**M. ನಾರಾಯಣರೆಡ್ಡಿ**
(Bsc census department retired supervisor)
ರಾಮಗುಂಡನಲ್ಲಿ ಪೋಸ್ಟ್, ವೈಟ್
ಫೀಲ್ಡ್ ರೋಡ್, ಬೆಂಗಳೂರು–066
Cell : 9482516023

**ಯೋಗೇಶ್**
ಸೂಲನಾಯಕನಹಳ್ಳಿ (ಗ್ರಾಮ),
ತುಮಕೂರು (ಜಿಲ್ಲೆ).
ಸೆಲ್:8762523963,9740744424

# ಯೋಗೀಶ್ವರರ ಸಂಚಲನಾತ್ಮಕ ರಚನೆಗಳ ಸಾರಾಂಶ

1. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಅಕ್ಷರ ಸಮುದಾಯವೇ, ಆತ್ಮ ಸಮಾಚಾರವಾಗಿದೆ. ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಕ್ಷಯ ಅಕ್ಷಯ ಸಮಾಚಾರ, ಪರಮಾತ್ಮನ ಸಮಾಚಾರ ಇದೆ.
2. ತ್ರೈತ ಸಿದ್ಧಾಂತ ಸಂಬಂಧ ಗ್ರಂಥಗಳನ್ನು ಭೌತಿಕವಾಗಿ ಬರೆದಿರುವುದು ಯೋಗೀಶ್ವರರು. ತ್ರೈತಸಿದ್ಧಾಂತ ಅನುಬಂಧ ಗ್ರಂಥಗಳಲ್ಲಿ ಅಭೌತಿಕವಾಗಿ ಯೋಗಶಕ್ತಿ ಇದೆ.
3. ತ್ರೈತ ಸಿದ್ಧಾಂತ ಇಂದೂ (ಹಿಂದೂ) ಧರ್ಮಗಳಲ್ಲಿ ವಿಪ್ಲವಾತ್ಮಕವಾದುದು. ತ್ರೈತ ಸಿದ್ಧಾಂತ ಗ್ರಂಥದಲ್ಲಿನ ಜ್ಞಾನ ಸಂಚಲನಾತ್ಮಕವಾದುದು, ಓದಿ ನೋಡಿರಿ.
4. ತ್ರೈತ ಸಿದ್ಧಾಂತ ಲೋಕದಲ್ಲಿ ಎಲ್ಲದಕ್ಕಿಂತ ದೊಡ್ಡದು.  ತ್ರೈತ ಸಿದ್ಧಾಂತ ಗ್ರಂಥಗಳು ಎಲ್ಲಾ ಗ್ರಂಥಗಳನ್ನು ಮೀರಿರುವವು. ಅದರ ರಚನಗಾರ ಯೋಗಿಗಳಿಗೆ ಈಶ್ವರನಾದ ಯೋಗೀಶ್ವರನು.
5. ತ್ರೈತ ಸಿದ್ಧಾಂತ ಗ್ರಂಥಗಳು ಕಾಣಿಸಿದರೆ ದುಷ್ಟಶಕ್ತಿಗಳು ಭಯದಿಂದ ನಡುಗುತ್ತವೆ. ತ್ರೈತ ಸಿದ್ಧಾಂತ ಗ್ರಂಥಗಳನ್ನು ಹತ್ತಿರ ಇಟ್ಟುಕೊಂಡರೆ ಯೋಗಶಕ್ತಿಗೆ ತಾಳಲಾರದೆ ಭಯಪಟ್ಟು ಹೋಗುತ್ತವೆ.
6. ತ್ರೈತ ಸಿದ್ಧಾಂತ ಜ್ಞಾನ ಭಗವದ್ಗೀತೆ ನಂತರ ಹೇಳಲಾದ ಅತ್ಯುತ್ತಮ ಜ್ಞಾನ. ತ್ರೈತ ಸಿದ್ಧಾಂತ ಗ್ರಂಥದಲ್ಲಿ ಕೃಷ್ಣನು ಮೊದಲು ಹೇಳದ ಜ್ಞಾನವನ್ನೂ ಸಹ ಯೋಗೀಶ್ವರರು ಹೇಳಿದ್ದಾರೆ.
7. ತ್ರೈತ ಸಿದ್ಧಾಂತ ಜ್ಞಾನ ಮಾನವ ಜೀವನಕ್ಕೆ ದೊಡ್ಡ ಪ್ರಕಾಶವು. ತ್ರೈತ ಸಿದ್ಧಾಂತದ ಬೆಳಕಿನೊಳಗೆ ಹೋದವನಿಗೆ ಅದು ದೈವಶಕ್ತಿ ಎಂದು ತಿಳಿಯುತ್ತದೆ.
8. ತ್ರೈತ ಸಿದ್ಧಾಂತ ಭಗವದ್ಗೀತೆಯನ್ನು ಬರೆದಿರುವುದು ಯೋಗೀಶ್ವರರು. ಆದ್ದರಿಂದ ತ್ರೈತ ಸಿದ್ಧಾಂತ ಎಂದರೆ ಏನೋ, ಅದು ಎಷ್ಟು ದೊಡ್ಡದೋ ತಿಳಿದಿದೆ.
9. ತ್ರೈತ ಸಿದ್ಧಾಂತವನ್ನು ಕುರಿತು ತಿಳಿದರೆ, ಯೋಗೀಶ್ವರರ ಗ್ರಂಥಗಳನ್ನು ಓದಿದರೆ, ಯಾವ ಮತಸ್ಥನಾದರೂ ಒಪ್ಪಿಕೊಳ್ಳುತ್ತಾನೆ, ಅದನ್ನು ಆಚರಿಸುತ್ತಾನೆ.
10. ತ್ರೈತ ಸಿದ್ಧಾಂತವನ್ನು ಪ್ರತ್ಯಕ್ಷವಾಗಿ ಭಗವಂತನು ಹೇಳಿರುವುದು. ಆದ್ದರಿಂದ ಎಲ್ಲಾ ಮತಗಳ ಸಾರಾಂಶವು ತ್ರೈತ ಸಿದ್ಧಾಂತ ಗ್ರಂಥಗಳಲ್ಲಿ ಇದೆ.
11. ತ್ರೈತ ಸಿದ್ಧಾಂತ ಗ್ರಂಥಗಳು ವ್ಯಕ್ತಿ ಬರೆದಿರುವವು ಅಲ್ಲ, ವ್ಯಕ್ತಿಯಲ್ಲಿನ ಶಕ್ತಿ ಬರೆದಿರುವವು. ಆದ್ದರಿಂದ ಎಲ್ಲ ರಹಸ್ಯಗಳೇ ಓದಿ ತಿಳಿದುಕೊಳ್ಳಿ.
12. ತ್ರೈತ ಸಿದ್ಧಾಂತ ಭಗವದ್ಗೀತೆ, ಬೈಬಲ್, ಖುರಾನ್ ಗ್ರಂಥಗಳಲ್ಲಿ ಇದೆ. ಆದರೂ ಹಿಂದೂಗಳಿಗಾಗಲಿ, ಕ್ರೈಸ್ತವರಿಗಾಗಲಿ, ಮುಸ್ಲೀಮ್‌ರಿಗಾಗಲಿ ಆ ವಿಷಯ ತಿಳಿದಿಲ್ಲ.

# ವಿಶ್ವ ವಿದ್ಯಾಲಯ



ನಾವು ಚಿಕ್ಕ ವಯಸ್ಸಿನಲ್ಲಿ ಪ್ರಾಥಮಿಕ ಪಾಠಶಾಲೆ (Primary school) ಗೆ ಹೋಗಿ ಅಕ್ಷರಾಭ್ಯಾಸ ಮಾಡಿದ್ದೇವೆ. ಅಂದರೇ ಬರಹ ಅಕ್ಷರಗಳನ್ನು ಕಲಿತು ಕೊಂಡಿದ್ದೇವೆ. ನಂತರ ಉನ್ನತ ಪಾಠಶಾಲೆ (High school)ಗೆ ಹೋಗಿ ಅಲ್ಲಿ ಸ್ವಲ್ಪ ವಿದ್ಯೆಯನ್ನು ಕಲಿತ್ತಿದ್ದೇವೆ. ನಂತರ ಕಾಲೇಜಿಗೆ (College) ಹೋಗಿ ವಿದ್ಯೆ ಕಲಿಯಬೇಕಾಗಿದೆ. ಆ ನಂತರ ವಿಶ್ವವಿದ್ಯಾಲಯಕ್ಕೆ (University) ಹೋಗಿ ವಿದ್ಯೆಯನ್ನು ಕಲಿಯುವವರು ಇದ್ದಾರೆ. ಆರಂಭ ಮಾಡಿರುವುದು ಪ್ರಾಥಮಿಕ ಪಾಠಶಾಲೆಯಲ್ಲಿ ಸಂಪೂರ್ಣ ವಿದ್ಯೆಯನ್ನು ಕಲಿಯುವುದು ವಿಶ್ವ ವಿದ್ಯಾಲಯದಲ್ಲಿ. ಎಲ್ಲದಕ್ಕಿಂತಲೂ ಚಿಕ್ಕದು ಪ್ರಾಥಮಿಕ ಪಾಠಶಾಲೆ, ಎಲ್ಲದಕ್ಕಿಂತಲೂ ದೊಡ್ಡದು ವಿಶ್ವ ವಿದ್ಯಾಲಯ. ಈಗ ನಾವು ವಿಶ್ವ ವಿದ್ಯಾಲಯವನ್ನು ಕುರಿತು ಹೇಳಿಕೊಳ್ಳೋಣ. ಮನುಷ್ಯರೆಲ್ಲರೂ ವಿಶ್ವ ವಿದ್ಯಾಲಯಕ್ಕೆ ಹೋಗಿ ಓದಲಾರರು. ಸಾಮರ್ಥ್ಯ ಇರುವವರು ಮಾತ್ರ ವಿಶ್ವ ವಿದ್ಯಾಲಯಕ್ಕೆ ಹೋಗಿ ಓದಬಲ್ಲರು. ಕೆಲವರು ಪ್ರಾಥಮಿಕ ಪಾಠಶಾಲೆಯವರೆಗೇ ಓದಿಕೊಳ್ಳುವರು. ಕೆಲವರು ಉನ್ನತ ಪಾಠಶಾಲೆವರೆಗು ಹೋಗಿ ಓದಬಲ್ಲವರಿದ್ದಾರೆ. ಇನ್ನೂ ಆರ್ಥಿಕ ಸಾಮರ್ಥ್ಯ, ಓದುವ ಸಹನೆ, ಶ್ರದ್ಧೆ ಇರುವವರು ಕಾಲೇಜಿನವರೆಗು ಹೋಗಿ ಓದಬಲ್ಲರು. ಕೊನೆಗೆ ಸಂಪೂರ್ಣ ವಿದ್ಯೆ ಕಲಿಯಬೇಕೆನ್ನುವವರು ಮಾತ್ರ ಕೊನೆಯದಾದ ವಿಶ್ವ ವಿದ್ಯಾಲಯಕ್ಕೆ ಹೋಗಿ ವಿದ್ಯೆಯನ್ನು ಕಲಿಯಬಲ್ಲರು.

ಒಂದು ಪ್ರಾಥಮಿಕ ಪಾಠಶಾಲೆಗೆ ನೂರುಜನ ವಿದ್ಯಾರ್ಥಿಗಳು ಬಂದರೇ ಐದು ವರ್ಷಗಳ ನಂತರ ಅದರಲ್ಲಿ 75 ಜನ ಮಾತ್ರ ಪ್ರೌಢಶಾಲೆಗೆ ಹೋಗಿ ಓದಬಲ್ಲವರಿರುತ್ತಾರೆ. ಪ್ರೌಢ ಪಾಠಶಾಲೆಯಲ್ಲಿ ಐದು ವರ್ಷಗಳು ಓದಿದ ನಂತರ ಅವರಲ್ಲಿ ಕೆಲವರು ಅಷ್ಟಕ್ಕೆ ನಿಂತುಹೋದರೇ ಉಳಿದ 50 ಜನರವರೆಗು ಕಾಲೇಜಿಗೆ ಹೋಗಿ ಓದುವವರಿರುತ್ತಾರೆ. ಅಲ್ಲಿ ಸ್ವಲ್ಪ ಕಾಲ ಓದಿದರೆ ನಂತರ ಆ ಐವತ್ತುಜನರಲ್ಲಿ ಕೆಲವರು ನಿಂತುಹೋದರೇ, ನಂತರ ಇಪ್ಪತ್ತು ಅಥವಾ ಇಪ್ಪತ್ತೈದು (20 ಅಥವಾ 25) ಜನ ವಿಶ್ವ ವಿದ್ಯಾಲಯಕ್ಕೆ ಹೋಗಿ ಓದುವವರಿರಬಹುದು. 25 ಜನ ವಿದ್ಯಾರ್ಥಿಗಳು ವಿಶ್ವ ವಿದ್ಯಾಲಯಕ್ಕೆ ಹೋಗಿ

ಓದಿದರೂ, ಅದರಲ್ಲಿ ಒಂದು ಐದುಜನ ಮಾತ್ರ ಪ್ರತಿಭೆಯಿರುವ ವಿದ್ಯಾರ್ಥಿಗಳಾದರೆ, ಉಳಿದವರು ಅಷ್ಟಷ್ಟುಮಾತ್ರ ಓದಬಲ್ಲವರೇ ಆಗಿರುತ್ತಾರೆ. 25ಜನ ವಿಶ್ವ ವಿದ್ಯಾಲಯದಲ್ಲಿ ಓದಿದರೆ ಅದರಲ್ಲಿ ಐದುಜನ ವಿದ್ಯೆಯನ್ನು ಚೆನ್ನಾಗಿ ಕಲಿತ ಪ್ರತಿಭೆ ಇರುವವರಾದರೇ, ಐದುಜನ ಪೂರ್ತಿ ವಿದ್ಯೆ ಬರದ ಪೆದ್ದ ವಿದ್ಯಾರ್ಥಿಗಳಾಗಿ ಇದ್ದರೇ ಉಳಿದ ಹದಿನೈದುಜನ ಮಧ್ಯತರಗತಿಯ ವಿದ್ಯಾರ್ಥಿಗಳಾಗಿ ಇದ್ದಾರೆ. ವಿಶ್ವ ವಿದ್ಯಾಲಯದಲ್ಲಿ ಸೇರಿದವರಿಗೆಲ್ಲರಿಗೂ ಒಳ್ಳೆಯ ಅಂಕಗಳು ಬರುತ್ತವೆಂಬ ನಂಬಿಕೆಯಿಲ್ಲ. ಆದರೂ ಎಲ್ಲರೂ ವಿಶ್ವ ವಿದ್ಯಾಲಯ ವಿದ್ಯಾರ್ಥಿಗಳೆಂದೇ ಕರೆಯಲ್ಪಡುತ್ತಾರೆ.

ಈ ದಿನ ಹೊರಗಿನ ಪ್ರಪಂಚದಲ್ಲಿ ಇರುವ ವಿದ್ಯಾವ್ಯವಸ್ಥೆಯನ್ನು ಕುರಿತು ಹೇಳಿಕೊಂಡರೇ ಹೀಗಿದೆಯೆಂದು ಹೇಳದೆ ತಪ್ಪುವುದಿಲ್ಲ. ಆದರೇ ವಿದ್ಯೆಗಳನ್ನು ಕುರಿತು ಹೇಳಿದರೇ ವಿದ್ಯೆಗಳು ಎರಡು ವಿಧಗಳಾಗಿ ಇವೆ. ಪ್ರಾಥಮಿಕ ಪಾಠಶಾಲೆಯಿಂದ ಪ್ರೌಢ ಪಾಠಶಾಲೆ, ಕಾಲೇಜು, ವಿಶ್ವ ವಿದ್ಯಾಲಯಗಳಲ್ಲಿ ಒಂದು ವಿಧವಾದ ವಿದ್ಯೆಯನ್ನು ಬೋಧಿಸುತ್ತಿದ್ದಾರೆ. ವಿದ್ಯೆಗಳು ಒಂದು ಪ್ರಪಂಚ ಸಂಬಂಧ ವಿದ್ಯೆಯಾಗಿರುವಾಗ, ಎರಡು ದೈವಿಕವಾದ ವಿದ್ಯೆ ಎಂದು ಹೇಳಬಹುದು. ಇವುಗಳನ್ನೇ ಪ್ರಕೃತಿ ವಿದ್ಯೆ, ಪರಮಾತ್ಮ ವಿದ್ಯೆ ಎಂದು ಸಹ ಅನ್ನುತ್ತಿರುತ್ತೇವೆ. ಪ್ರಪಂಚ ವಿದ್ಯೆ ಅಥವಾ ಪ್ರಕೃತಿ ವಿದ್ಯೆ ಎನಲ್ಪಡುವುದನ್ನೇ ಈದಿನ ಪ್ರಾಥಮಿಕ ಪಾಠಶಾಲೆಯಿಂದ ವಿಶ್ವ ವಿದ್ಯಾಲಯಗಳ (University) ವರೆಗು ಕಲಿಸುತ್ತಿದ್ದಾರೆ. ಈ ವಿದ್ಯಾಲಯಗಳಲ್ಲಿ ಬೋಧಿಸುವ ಬೋಧನೆಗಳೆಲ್ಲ ಪ್ರಪಂಚ ವಿದ್ಯೆಯನ್ನು ಕಲಿಸುತ್ತಿದ್ದರೆ, ಆ ಪ್ರಪಂಚ ವಿದ್ಯೆ ಮನುಷ್ಯನೊಂದು ವಿಜ್ಞಾನವನ್ನು ಬೆಳೆಸಿ ಪ್ರಪಂಚದಲ್ಲಿ ಬದುಕುವುದಕ್ಕೆ ದಾರಿಯನ್ನು ತೋರುತ್ತಿದೆ. ಪ್ರಪಂಚ ಸಂಬಂಧವಾಗಿ ಕಲಿಯುವ ಎಷ್ಟು ವಿದ್ಯೆಗಳಾದರೂ ಅವೆಲ್ಲವೂ ಕೇವಲ ಮನುಷ್ಯನ ಜೀವನಕ್ಕಾಗಿ ಮಾತ್ರವೇ ಉಪಯೋಗಪಡುತ್ತಿವೆ. ಆದ್ದರಿಂದ 'ಕೂಳಿಗಾಗಿ ಕೋಟಿ ವಿದ್ಯೆಗಳು' ಎಂದು ಕೆಲವರೆಂದಿದ್ದಾರೆ.

ಕೂಳಿಗಾಗಿ ಕೋಟಿ ವಿದ್ಯೆಗಳು ಎಂದವರೇ ಮತ್ತೊಂದು ಮಾತಾಗಿ **"ಮುಕ್ತಿಗಾಗಿ ಮೂರು ವಿದ್ಯೆಗಳು"** ಎಂದಿದ್ದಾರೆ. 'ಕೂಳಿಗಾಗಿ ಕೋಟಿ ವಿದ್ಯೆಗಳು' ಎಂಬ ಮಾತನ್ನು ಬಹಳಜನ ಕೇಳಿರುತ್ತಾರೆ ಆದರೇ, 'ಮುಕ್ತಿಗಾಗಿ ಮೂರು ವಿದ್ಯೆಗಳು' ಎಂಬ ಮಾತನ್ನು ಬಹುಶಃ ಯಾರೂ ಕೇಳಿರುವುದಿಲ್ಲ ಎಂದುಕೊಳ್ಳುತ್ತೇನೆ. ನಾವು ಇದಕ್ಕು ಮೊದಲು ಹೇಳಿಕೊಂಡ ಎರಡು ವಿದ್ಯೆಗಳಲ್ಲಿ ಎರಡನೆಯದಾದ ಪರಮಾತ್ಮವಿದ್ಯೆಯನ್ನು ಉದ್ದೇಶಿಸಿ ಹೇಳಿರುವ ಮಾತಾಗಿ 'ಮುಕ್ತಿಗಾಗಿ ಮೂರು ವಿದ್ಯೆಗಳೆಂದು' ಹೇಳಲ್ಪಟ್ಟಿದೆ. ನಮಗೆ ತಿಳಿದಿರುವ ಪ್ರಪಂಚ ಸಂಬಂಧವಾದ ವಿದ್ಯೆಯಲ್ಲಿ ಎಷ್ಟೋ ಗುಂಪುಗಳು ಇವೆ. ಪ್ರಾಥಮಿಕ ವಿದ್ಯೆಯಲ್ಲಿ ಅಕ್ಷರಾಭ್ಯಾಸ ಮೊದಲು ಓದುವುದು, ಬರೆಯುವುದು ಕಲಿಸಿದರೆ, ಪ್ರೌಢ ಪಾಠಶಾಲೆಗಳಲ್ಲಿ ಭಾಷೆಗಳು, ಅವುಗಳ ವಿವರವನ್ನು, ತಿಳಿಸುತ್ತಾ ಸಾಮಾನ್ಯ, ಸಾಂಘಿಕ ವಿದ್ಯೆಗಳನ್ನು ಪ್ರಾರಂಭಿಸುತ್ತಾರೆ. ನಂತರ ಕಾಲೇಜಿನಲ್ಲಿ ಗಣಿತ, ರಸಾಯನಿಕ, ಖಗೋಳ, ಭೌತ ಶಾಸ್ತ್ರಗಳನ್ನು ಕುರಿತು ಅವುಗಳ ವಿಭಾಗಗಳನ್ನು ಕುರಿತು ತಿಳಿಸುವರು. ಈ ವಿಧವಾಗಿ ಹೋಗ್ತಾಹೋಗ್ತಾ ವಿದ್ಯೆಗಳು ಬೆಳೆಯುತ್ತಾ, ಸೀಳುತ್ತ ಹೋಗಿ ಇಂಜಿನಿಯರ್‌ಗಳಲ್ಲಿ ಅನೇಕ ವರ್ಗಗಳು ಏರ್ಪಟ್ಟಿರುವಾಗ, ಡಾಕ್ಟರ್‌ಗಳಲ್ಲಿ ಅನೇಕ ವಿಧಗಳು, ಸೈನ್ಸ್‌ನಲ್ಲಿ ಅನೇಕ ಭಾಗಗಳು, ಎಷ್ಟೋ ವಿದ್ಯೆಗಳು ಎಷ್ಟೋ ಸೀಳಿಕೆಗಳಾಗಿ ಬದಲಾಗಿ ಹೋಗುತ್ತಿವೆ. ಇವೆಲ್ಲವೂ ಮನುಷ್ಯನ ಜೀವನಕ್ಕಾಗಿ ಕೆಲಸಕ್ಕೆ ಬರುವವೆ ಎಂದು ಹೇಳಬಹುದು. ಆದ್ದರಿಂದ ಕೆಲವರು ಸೂತ್ರಪ್ರಾಯವಾಗಿ 'ಕೂಳಿಗಾಗಿ ಕೋಟಿ ವಿದ್ಯೆಗಳು' ಎಂದು ಹೇಳುವುದು ನಡೆದಿದೆ. ಮನುಷ್ಯ ಬದುಕುವುದಕ್ಕೇ ಅನೇಕ ವಿಧಗಳಾಗಿ ಪ್ರವರ್ತಿಸುತ್ತಿದ್ದಾನೆಂದು ತಿಳಿಯುವುದಕ್ಕೆ, ಕೂಳಿಗಾಗಿ ಕೋಟಿ ವಿದ್ಯೆಗಳೆಂದು ಅಂದಹಾಗೆ ಕೆಲವರು ಹೇಳುತ್ತಿದ್ದಾರೆ. ಅವರು ಹೇಗೆ ಅರ್ಥ ಹೇಳಿದರೂ ಈ ದಿನ ಪ್ರಪಂಚದಲ್ಲಿ ನಡೆಯುತ್ತಿರುವುದು ಅದೇ ಎಂದು ಹೇಳಬಹುದು. ಪ್ರತಿ ಮನುಷ್ಯ ತಾನು ಕಲಿತ ವಿದ್ಯೆಯಿಂದ ಬದುಕುತ್ತಿದ್ದಾನೆ.

**ಪ್ರಶ್ನೆ :– ಪ್ರತಿ ಮನುಷ್ಯನನ್ನು ಸೃಷ್ಟಿಸಿರುವವನು ದೇವರೇ ಎಂದು ಹೇಳಿದ್ದೀರ. ಹಾಗೆಯೇ ಪ್ರತಿ ಮನುಷ್ಯನನ್ನು ಪೋಷಿಸುವವನು ದೇವರೇ ಎಂದು ಹೇಳಿದ್ದೀರ.**

**ಈಗ ಯಾರು ಕಲಿತ ವಿದ್ಯೆಯಿಂದ ಅವನು ಬದುಕುತ್ತಿದ್ದಾನೆಂದು ಅನ್ನುತ್ತಿದ್ದೀರ. ದೇವರು ಪೋಷಿಸುತ್ತಿದ್ದಾನಾ? ಅಥವಾ ಸ್ವತಃವಾಗಿ ಮನುಷ್ಯನೇ ಬದುಕುತ್ತಿದ್ದಾನಾ? ಎಂಬ ಪ್ರಶ್ನೆಗಳು ನಮ್ಮಲ್ಲಿ ಬಂದಿವೆ. ನೀವು ಎರಡು ವಿಧಗಳಾಗಿ ಹೇಳಿ ನಮ್ಮನ್ನು ಗೊಂದಲದಲ್ಲಿ ಇಡುತ್ತಿದ್ದಿರ. ಹಾಗಲ್ಲದೇ ಯಾವುದು ವಾಸ್ತವವೋ, ಯಾವುದು ಜ್ಞಾನವೋ ಅದನ್ನೇ ಹೇಳಿರಿ?**

**ಉತ್ತರ :–** ಒಂದುಕಡೆ ಭಗವದ್ಗೀತೆಯಲ್ಲಿ ಕರ್ಮಯೋಗದಲ್ಲಿ ಮೊದಲೇ ಕರ್ಮ, ಬ್ರಹ್ಮ ಯೋಗಗಳನ್ನು ಕುರಿತು ಅರ್ಜುನನು ಹೀಗೆಯೇ ಕೇಳಿ ಯಾವುದೋ ಒಂದು ಹೇಳೆಂದನು. ಈಗ ನೀವು ಸಹ ಹಾಗೆಯೇ ಕೇಳಿರುವೆ. ಪ್ರಪಂಚದಲ್ಲಿ ಭಾವನೆಯನ್ನನುಸರಿಸಿ ಎರಡು ವಿಧಗಳಿವೆ. ಮನುಷ್ಯನಲ್ಲಿನ ಭಾವನೆಯನ್ನನುಸರಿಸಿ ಅವನೇ ಸ್ವತಃವಾಗಿ ಬದುಕಿದಂತೆ ಲೆಕ್ಕಿಸಲ್ಪಡುತ್ತಿದೆ. ಹಾಗೆಯೇ ಅವನ ಭಾವನೆಯನ್ನನುಸರಿಸಿ ದೇವರೇ ಅವನನ್ನು ಪೋಷಿಸುವಂತೆ ಲೆಕ್ಕಿಸಲ್ಪಡುತ್ತಿದೆ. ಆಧ್ಯಾತ್ಮಿಕ ವಿದ್ಯೆಯಲ್ಲಿ ಮನುಷ್ಯನ ಭಾವನೆಯನ್ನನುಸರಿಸಿ ಹೇಳಬೇಕಾಗಿರುತ್ತದೆ. ದೇವರು ಎಲ್ಲರನ್ನು ಪೋಷಿಸುವುದು ವಾಸ್ತವವೇ ಆದರೂ 'ಕರ್ಮಸಿದ್ಧಾಂತ'ದ ಪ್ರಕಾರ ಮನುಷ್ಯನ ಭಾವನೆಯನ್ನನುಸರಿಸಿ ಎರಡು ವಿಧಗಳಾಗಿ ಹೇಳಬೇಕಾಗಿಬರುತ್ತದೆ. ಸ್ವಲ್ಪವಾದರೂ ಜ್ಞಾನ ತಿಳಿಯದವನು ತನ್ನ ಅಜ್ಞಾನದಿಂದ ಎಲ್ಲವೂ ತಾನೇ ಮಾಡುತ್ತಿರುವಂತೆ ಅಂದುಕೊಳ್ಳುತ್ತಿರುವು ದರಿಂದ ವಾಸ್ತವವಾಗಿ ಎಲ್ಲಾ ದೇವರೇ ಮಾಡುತ್ತಿದ್ದರೂ, ಆ ವಿಷಯವನ್ನು ಲೆಕ್ಕಿಸದೆ ಅಲ್ಲಿ ಮನುಷ್ಯ ಮಾಡಿದಂತೆಯೇ ಲೆಕ್ಕಿಸಿ, ಅದರಲ್ಲಿನ ಫಲಿತವಾದ ಕರ್ಮವನ್ನು ಅವನಿಗೇ ಅಂಟಿಕೊಳ್ಳಬೇಕಾಗಿರುತ್ತದೆ. ಆಧ್ಯಾತ್ಮಿಕದಲ್ಲಿ ಇದು ದೇವರೇ ನಿರ್ಣಯಿಸಿದ ಪದ್ಧತಿ.

ಈಗ ಅಸಲು ವಿಷಯಕ್ಕೆ ಬರೋಣ. 'ಕೂಳಿಗಾಗಿ ಕೋಟಿ ವಿದ್ಯೆಗಳು' ಎಂಬಮಾತನ್ನು ನಾನು ಕೂಡಾ ಬಹಳ ಸಲ ಕೇಳಿದ್ದೇನೆ. ಆದರೇ **"ಮುಕ್ತಿಗಾಗಿ ಮೂರು ವಿದ್ಯೆಗಳು"** ಎಂಬ ಮಾತನ್ನು ಯಾರೂ ಅಂದಿರುವಹಾಗೆ ನಾನು ಇಲ್ಲಿಯವರೆಗೂ ಕೇಳಿರಲಿಲ್ಲ. ಪ್ರಸ್ತುತ ಈಗ ಮಾತ್ರವೇ ಮೊದಲು ಈ ಮಾತನ್ನು

ಕೇಳುತ್ತಿದ್ದೇನೆ. ನನಗೇ ಇದು ಹೊಸಮಾತಾಗಿ ಇರುವಾಗ, ಈ ಮಾತು ನಿಮಗೂ ಸಹ ಹೊಸದಾಗಿಯೇ ಇರುತ್ತದೆ ಎಂದು ಅಂದುಕೊಳ್ಳುತ್ತೇನೆ.

**ಪ್ರಶ್ನೆ :– ಈ ಮಾತು ನಮಗೆ ಹೊಸದೇ, ನಾವು ಯಾವಾಗಲೂ, ಎಲ್ಲೂ ಕೇಳಲಿಲ್ಲ. ಈ ಮಾತು ಹೊಸದು ಎಂಬ ಮಾತು ಯಾವಾಗಲೂ ಕೇಳದ ನಮಗೆ ಸರಿಹೋಗುತ್ತದೆ ಆದರೇ, ನಿಮಗೆ ಸರಿಹೋಗುವುದಿಲ್ಲವೆಂದು ನೀವೇ ಹೇಳುತ್ತಿರುವಾಗ, ನಿಮಗೆ ಹೊಸದೇನು? ನಿಮಗೆ ತಿಳಿಯದೇ ಹೇಳಲಿಲ್ಲ, ಎಲ್ಲಾ ನಿಮಗೆ ತಿಳಿದೇ ಹೇಳುತ್ತಿದ್ದೀರ, ಹಾಗಿರುವಾಗ ಈ ಮಾತು ನಿಮಗೆ ಹೇಗೆ ಹೊಸದಾಗಿದೆ?**

**ಉತ್ತರ :–** ಇದಕ್ಕೆ ಮೊದಲ ಪ್ರಶ್ನೆಯಲ್ಲೇ ಒಂದು ಮಾತನ್ನು ಹೇಳಿದ್ದೇನೆ. ಎಲ್ಲಾ ದೇವರೇ ಮಾಡುತ್ತಿರುವ ಮಾತು ವಾಸ್ತವವೇ, ಆದರೂ ಮನುಷ್ಯ ತಾನೇ ಮಾಡುತ್ತಿರುವಂತೆ **'ಅಹಂ ಭಾವನೆಯನ್ನು'** ಪಡೆಯುತ್ತಿರುವುದರಿಂದ ಆತನ ಭಾವನೆಯನ್ನು ಅನುಸರಿಸಿ ಲೆಕ್ಕಿಸಲ್ಪಡುವುದೆಂದು ಹೇಳಿದ್ದೇವೆ. ಮನುಷ್ಯನಿಗೆ ಏನು ಕೈಲಾಗುವುದಿಲ್ಲ, ಮನುಷ್ಯನಿಗೆ ಯಾವ ಬಲವು ಇಲ್ಲದಿರುವುದರಿಂದ ಆತನಿಗೆ ಏನು ಕೈಲಾಗದೆಂದು, ಏನೂ ಮಾಡಲಾರನೆಂದು ಹೇಳಬೇಕು. ಶರೀರದಲ್ಲಿನ ಜೀವಿಯು ಕುರುಡನು, ಕುಂಟನು, ಮೂಗನು, ಕಿವುಡನು. ಅಷ್ಟೇ ಅಲ್ಲದೇ ಎಲ್ಲಾ ವಿಧಗಳಲ್ಲಿನ ಅಂಗವಿಕಲನು. ಅವನು ಯಾವ ಚಿಕ್ಕ ಕೆಲಸವನ್ನು ಸಹ ಮಾಡಲಾರದ ನಿಶ್ಶಕ್ತನು. ಆದರೂ 'ಎಲ್ಲಾ ನಾನೇ ಮಾಡುತ್ತಿದ್ದೇನೆ' ಎಂಬ ಅಹಂಭಾವದಿಂದ ಹೇಳುತ್ತಿರುತ್ತಾನೆ. ಇಲ್ಲಿ ವಾಸ್ತವವಾಗಿ ಎಲ್ಲಾ ದೇವರೇ ಮಾಡುತ್ತಿದ್ದರೂ, ಮನುಷ್ಯ ಏನೂ ಮಾಡದಿದ್ದರೂ, ಮನುಷ್ಯನಿಂದ, ಮನುಷ್ಯನ ಅವಯವಗಳ ಮೂಲಕ ನಡೆಯುವ ಕೆಲಸಗಳನ್ನು ನೋಡಿ, ಮನುಷ್ಯ ತಾನೇ ಸ್ವತಃವಾಗಿ ಮಾಡುತ್ತಿದ್ದೇನೆಂದು ಅಂದುಕೊಳ್ಳುತ್ತಿದ್ದಾನೆ. ಅವನ ಭಾವನೆಯನ್ನನುಸರಿಸಿ ಅವನು ಮಾಡಿದಂತೆಯೇ ಲೆಕ್ಕಿಸಲ್ಪಡುತ್ತಿವೆ. ಇಲ್ಲೇ ಕರ್ಮಯೋಗ ರಹಸ್ಯವೆಲ್ಲಾ ಅಡಗಿದೆ. ಇಲ್ಲಿ ಸ್ವಲ್ಪ ಮಾತ್ರ ಜ್ಞಾಪಕವಿದ್ದು ತಾನು ಮಾಡಲಿಲ್ಲ, ಮಾಡುವವನು ದೇವರೇ ಎಂದು ತಿಳಿದಿದ್ದರೇ

ಕರ್ಮಯೋಗಿಯಾಗಿ ಮನುಷ್ಯ ಬದಲಾಗುವನು. ಕರ್ಮ ಅಂಟದ ಸ್ಥಿತಿಯಲ್ಲಿ ಇರುವನು.

ನಾನು ಕೆಲವು ನೂರು ವರ್ಷಗಳಿಂದ, ಈಗ ಕೆಲವು ಹತ್ತು ವರ್ಷಗಳಿಂದ ಇದೇ ಜ್ಞಾನ ಹೊಂದಿರುವುದರಿಂದ, ಅಂದರೇ ಅನೇಕ ಜನ್ಮಗಳ ಸಂಸ್ಕಾರ ಬಲದಿಂದ ಈ ಜನ್ಮದಲ್ಲಿ ಕೂಡಾ ಅದೇ ಜ್ಞಾಪಕವಿರುವುದರಿಂದ ಇರುವುದು ಇದ್ದಹಾಗೆ ಹೇಳಿದರೇ, ನನ್ನ ಶರೀರದಲ್ಲಿನ ನನ್ನ ಬಾಯಿಂದ ಮಾತನಾಡಿದ ಮಾತನ್ನು, ಹಾಗೆಯೇ ನನ್ನ ಬುದ್ಧಿಯಿಂದ ಹೊರಗೆ ಬಂದಿರುವ ಮಾತನ್ನು ನಾನು ಹೇಳಿದಂತೆ ಹೊರಗೆ ಕಾಣಿಸಿದರೂ ಅದು ನನ್ನಿಂದ ಬಂದ ಹೊಸಮಾತು. ನಾನು ಜೀವಿಯಾಗಿ ಈಗಲೇ ಮೊದಲಬಾರಿ ಕೇಳುತ್ತಿದ್ದೇನೆ. ಶರೀರದ ಮಧ್ಯದಲ್ಲಿ, ದೊಡ್ಡನಾಡಿಯಲ್ಲಿ, ನಿವಾಸವಿರುವ ಆತ್ಮವೇ ಈ ಮಾತನ್ನು ಹೊಸದಾಗಿ ಬುದ್ಧಿಗೆ ತಿಳಿಸಿದರೇ, ಬುದ್ಧಿಯಿಂದ ಮನಸ್ಸಿಗೆ ಸೇರಿ ಅದು ಬಾಯಿಂದ ಹೇಳಲಾಗಿದೆ. ಈ ಮಾತನ್ನು ಎಲ್ಲರಿಗಿಂತಲೂ ಮೊದಲು ನನ್ನ ಬುದ್ಧಿಗೆ ಸೇರಿದಾಗಲೇ ನಾನು ಕೇಳಿಸಿಕೊಂಡಿದ್ದರೂ, ನಾನು ಸಹ ನಿಮಗಿಂತಲೂ ಸ್ವಲ್ಪ ಮುಂಚೆ ಕೇಳಿದರೂ, ಅದಕ್ಕಿಂತ ಮೊದಲು ಆ ಮಾತು ವಾಸ್ತವವಾಗಿ ನನಗೆ ತಿಳಿಯದೆಂದೇ ಹೇಳಬೇಕು. ಒಳಗಿನ ದೃಷ್ಟಿ ಇಲ್ಲದವರು, ಅಂತರ್ ಜ್ಞಾನ ತಿಳಿಯದವರು 'ನಾನು ಹೇಳಿದ್ದೇನೆ' ಎನ್ನುವ ಭಾವನೆಯನ್ನೇ ಹೊಂದಬಹುದು. ಹಾಗೆಯೇ 'ನಾನೇ ಮಾಡಿದ್ದೇನೆ' ಎನ್ನುವ ಭಾವನೆಯನ್ನೇ ಹೊಂದಬಹುದು. ಆದರೇ ನಾನೇ ಹಾಗೆ ನಾನು ಅಂದುಕೊಳ್ಳುವ ಅವಕಾಶವೇ ಇಲ್ಲ. ಆದ್ದರಿಂದ ಹೊಸದಾಗಿ ಬಂದ ಆ ಮಾತನ್ನು 'ನಾನು ನಿಮ್ಮಹಾಗೆ ಮೊದಲಸಲ ಕೇಳಿದ್ದೇನೆ' ಎಂದು ಹೇಳಿದ್ದೇನೆ. ಒಂದುವೇಳೆ ಈ ಮಾತಿಗೆ ವಿವರವನ್ನು ಹೇಳಬೇಕೆಂದರೂ, ಆ ಮಾತು ನನಗೂ ಹೊಸದಾಗಿರುವಾಗ ವಿವರ ನನಗೆ ತಿಳಿಯದೆಂದೇ ಅಲ್ಲವೇ ಅರ್ಥ. ಆದರೂ ನನ್ನಿಂದಲೇ ಆ ವಿವರ ಬಂದರೂ ಆಶ್ಚರ್ಯವಾಗಬೇಕಾದ ಅವಶ್ಯಕತೆ ಇಲ್ಲ. ಹೇಳುವವನು ಕೂಡಾ ಹೃದಿ ಮಧ್ಯದಲ್ಲಿರುವವನೇ ಹೇಳುವನು.

**ಪ್ರಶ್ನೆ :– 'ಕೂಳಿಗಾಗಿ ಕೋಟಿ ವಿದ್ಯೆಗಳು' ಎಂದು ಇತರರು ಎನ್ನುವುದನ್ನು**

**ಇದಕ್ಕು ಮೊದಲು ಕೆಲವುಬಾರಿ ಕೇಳಿದ್ದೇವೆ. ಜೀವನಕ್ಕಾಗಿ ಅನೇಕ ಕೆಲಸಗಳು ಮಾಡಿ ಮನುಷ್ಯ ಜೀವಿಸುವುದರಿಂದ ಆ ವಿಧವಾಗಿ ಎಂದಿದ್ದಾರೆಂದು ಅರ್ಥವಾಗಿದೆ. ವಾಸ್ತವವಾಗಿ ಹೊರಗೆ ಪ್ರಪಂಚದಲ್ಲಿ ಕೂಡಾ ಹಾಗೆಯೇ ನಡೆಯುತ್ತಿದೆ. ಮನುಷ್ಯ ಬದುಕುವುದಕ್ಕೆ ಕೆಲವರಿಗೆ ಸುಲಭವಾದ ಕೆಲಸಗಳಿವೆ. ಕೆಲವರಿಗೆ ಕಷ್ಟವಾದ ಕೆಲಸಗಳಿವೆ. ಕೆಲವರಿಗೆ ದೊಡ್ಡವೆಂದು ಹೇಳುವ ಕೆಲಸಗಳಿರುವಾಗ, ಕೆಲವರಿಗೆ ನೀಚವಾಗಿರುವವೆಂದು ಹೇಳಲಾಗುವ ಕೆಲಸಗಳಿವೆ. ಕೆಲವರಿಗೆ ಸ್ವಲ್ಪ ಸಮಯ ಮಾಡುವ ಕೆಲಸಗಳಿರುವಾಗ, ಕೆಲವರಿಗೆ ಬಹಳ ಸಮಯ ಮಾಡುವ ಕೆಲಸಗಳಿವೆ. ಕೆಲವರಿಗೆ ಪೊಲೀಸ್ ಕೆಲಸವಿರುವಾಗ, ಕೆಲವರಿಗೆ ಕಳ್ಳತನ ಮಾಡುವ ಕೆಲಸಗಳಿವೆ. ಕೆಲವರಿಗೆ ಹೇಳುವ ಕೆಲಸವಿರುವಾಗ, ಕೆಲವರಿಗೆ ಮಾಡುವ ಕೆಲಸಗಳಿವೆ. ಕೆಲವರಿಗೆ ಹೂಣುವ ಕೆಲಸವಿರುವಾಗ, ಕೆಲವರಿಗೆ ಅಗೆಯುವ ಕೆಲಸಗಳಿವೆ. ಕೆಲವರು ಡಾಕ್ಟರ್‌ಗಳಾಗಿ ಚಾಕುಗಳಿಂದ ಆಪರೇಷನ್ ಮಾಡಿ ಮನುಷ್ಯರನ್ನು ಬದುಕಿಸುವ ಕೆಲಸಗಳಿರುವಾಗ, ಕೆಲವರು ಹಂತಕರಾಗಿ ಚಾಕುಗಳಿಂದ ಕೊಲ್ಲುವ ಕೆಲಸವನ್ನು ಮಾಡುತ್ತಿದ್ದಾರೆ. ಕೆಲವರಿಗೆ ಬರೆಯುವ ಕೆಲಸವಿದ್ದರೇ, ಕೆಲವರಿಗೆ ಓದುವ ಕೆಲಸವಿದೆ. ಕೆಲವರಿಗೆ ಮಾರಾಟಮಾಡುವ ಕೆಲಸವಿದ್ದರೇ, ಕೆಲವರಿಗೆ ಕೊಳ್ಳುವ ಕೆಲಸ ಮಾತ್ರವೇ ಇದೆ. ಹೀಗೆ ಹೇಳುತ್ತಾ ಹೋದರೇ, ಸಾವಿರ, ಲಕ್ಷಗಳಿಂದ ಸುಮಾರು ಕೋಟಿವರೆಗು ಕೆಲಸಗಳಿರುವುದರಿಂದ, ಎಲ್ಲಾ ಕೆಲಸಗಳು ಮನುಷ್ಯ ಜೀವಿಸುವುದಕ್ಕೇ ಮಾಡಲಾಗುತ್ತಿರುವುದರಿಂದ 'ಕೂಳಿಗಾಗಿ ಕೋಟಿ ವಿದ್ಯೆಗಳು' ಎಂದು ಎನ್ನುವುದರಲ್ಲಿ ಅರ್ಥವಿದೆ. 'ಮುಕ್ತಿಗಾಗಿ ಮೂರು ವಿದ್ಯೆಗಳು' ಎನ್ನುವುದರಲ್ಲಿ ಅರ್ಥವೇನಿದೆ?**

**ಉತ್ತರ :– 'ಕೂಳಿ ಗೋಸ್ಕರ'** (ಕೂಳಿಗಾಗಿ) ಎಂದು ಐದಕ್ಷರಗಳ ಪದವನ್ನು ಹೇಳಿದಂತೆ **'ಮುಕ್ತಿ ಗೋಸ್ಕರ'** (ಮುಕ್ತಿಗಾಗಿ) ಎಂದು ಐದಕ್ಷರಗಳ ಪದವನ್ನೇ ಹೇಳಿದ್ದಾರೆ. ಎರಡು ಪದಗಳಲ್ಲಿ ಐದು ಅಕ್ಷರಗಳೇ ಇದ್ದರೂ ಅರ್ಥಗಳು ಮಾತ್ರ ಬಹಳ ಭಿನ್ನವಾಗಿ ಇರುತ್ತದೆ. ಕೂಳಿಗಾಗಿ ಅಂದರೇ ಬದುಕುವುದಕ್ಕಾಗಿ ಅಥವಾ ಜೀವಿಸುವುದಕ್ಕಾಗಿ ಎಂದು ಹೇಳಬಹುದು. ಕೋಟಿವಿದ್ಯೆಗಳು ಎನ್ನುವುದಕ್ಕೆ ಅರ್ಥ ಗೊತ್ತು. ಆದರೇ ಮೂರು ವಿದ್ಯೆಗಳು ಎನ್ನುವವು ಯಾವವು?

ಎಂದು ತಿಳಿಯಬೇಕಾಗಿದೆ. ಬದುಕುವುದಕ್ಕೆ ಎಲ್ಲರಿಗೂ ಆಹಾರ ಅವಶ್ಯ. ಆಹಾರಕ್ಕಾಗಿ ಎಷ್ಟೋ ಕೆಲಸಗಳು ಮಾಡಬೇಕು. ಕೆಲವು ಕೆಲಸಗಳು ಮಾಡುವುದಕ್ಕೆ ಮೊದಲು ಅದನ್ನು ಕುರಿತು ತಿಳಿದಿರಬೇಕು. ಕೆಲಸವನ್ನು ಕುರಿತು ತಿಳಿಯುವುದನ್ನು ಅಥವಾ ಕಲಿಯುವುದನ್ನು 'ವಿದ್ಯೆ' ಎಂದು ಹೇಳುತ್ತಿದ್ದೇವೆ. ಕೋಟಿ ಕೆಲಸಗಳಿಗೆ ಕೋಟಿ ವಿದ್ಯೆಗಳಿವೆಯೆಂದು ಹೇಳಬಹುದು. ಆದರೇ ಇಲ್ಲಿ ಮುಕ್ತಿಯನ್ನು ಸಂಪಾದಿಸುವುದಕ್ಕೆ ಅಥವಾ ಮುಕ್ತಿಯನ್ನು ಹೊಂದುವುದಕ್ಕೆ ಮೂರು ಕೆಲಸಗಳಿವೆ ಎಂದು ತಿಳಿಯುತ್ತಿದೆ. ಆ ಮೂರು ಕೆಲಸಗಳಿಗೆ ಮೂರು ವಿದ್ಯೆಗಳಿರುವಹಾಗೆ ಹೇಳಿದ್ದಾರೆ. ಈ ವಿಷಯದಲ್ಲಿ ಮೊದಲು **'ಮುಕ್ತಿ'** ಎಂಬ ಪದಕ್ಕೆ ಅರ್ಥ ತಿಳಿದುಕೊಳ್ಳೋಣ.

**"ಮುಕ್ತಿ"** ಎಂದರೇ 'ಬಂಧನದಿಂದ ಬಿಡುಗಡೆ ಪಡೆಯುವುದು' ಎಂದು ನೇರವಾಗಿ ಹೇಳಬಹುದು. **'ಬಂಧನ'** ಎಂದರೇ ಬಂಧಿಸಲ್ಪಟ್ಟಿರುವುದು. ಬಂಧನಗಳನ್ನು ಕಿತ್ತಿ ಹಾಕುವುದನ್ನು ಮುಕ್ತಿ ಅಥವಾ ವಿಮುಕ್ತಿ ಎಂದು ಹೇಳಬಹುದು. ಬಂಧನಗಳನ್ನು ಕಿತ್ತಿ ಹಾಕುವುದು ಒಂದು ಕೆಲಸವಾದರೇ ಆ ಕೆಲಸವನ್ನು ಕೂಡಾ ಕಲಿಯಬೇಕಾಗಿರುವುದೇ. ಕಲಿಯಬೇಕಾಗಿರುವಂತದ್ದು ಯಾವುದಾದರೂ ಅದು ವಿದ್ಯೆಯೇ. ಮನುಷ್ಯನಿಗೆ ತಿಳಿಯದೇ ಬಂಧಿಸಲ್ಪಟ್ಟಿದ್ದಾನೆ. ತಾನು ಜನ್ಮದಿಂದಲೇ ಒಂದು ಬಂಧೀಯೆಂದೂ, ಮೂರು ಹಗ್ಗದಿಂದ ಬಂಧಿಸಲ್ಪಟ್ಟಿದ್ದೇನೆಂದು ಯಾರಿಗೂ ತಿಳಿದಿಲ್ಲ. ಯಾರೊಂದಿಗಾದರೂ ಈ ಮಾತು ಹೇಳಿದರೇ ನಿನಗೆ ಏನಾದರೂ ಹುಚ್ಚಾ? ಎಂದು ಅವರು ಕೇಳಬಹುದು. ಏಕೆಂದರೇ! ಯಾವ ಮನುಷ್ಯನಿಗೂ ತಾನು ಬಂಧಿಸಲ್ಪಟ್ಟಹಾಗೆ ತಿಳಿದಿಲ್ಲ. ಕಾಣಿಸದ ಹಗ್ಗದಿಂದ, ಕಾಣಿಸದೆ ಬಂಧೀಯಾಗಿ ಇದ್ದೇನೆಂದು ದೊಡ್ಡ ದೊಡ್ಡ ವಿದ್ಯೆ ಓದಿದವರಿಗೂ ಕೂಡಾ ತಿಳಿದಿಲ್ಲ. ಬಾಹ್ಯನೇತ್ರಗಳಿಗೆ ತಿಳಿಯದ ಬಂಧನ, ಅಂತರ್ ನೇತ್ರವಾದ ಜ್ಞಾನನೇತ್ರಕ್ಕೆ ತಿಳಿಯುವುದು. ಜ್ಞಾನನೇತ್ರವು ಜ್ಞಾನವಿರುವ ವರಿಗೆ ಮಾತ್ರವೇ ಇರುತ್ತದೆ. ಎಂದರೇ ದೈವಜ್ಞಾನವಿರುವವರಿಗೆ ಮಾತ್ರವೇ ತಿಳಿಯುವುದು.

ಮನುಷ್ಯನಿಗೆ ಹುಟ್ಟಿನಿಂದಲೇ ಸಾತ್ವಿಕ, ರಾಜಸ, ತಾಮಸ ಎಂಬ ಮೂರು ಹಗ್ಗಗಳಿಂದ ಬಂಧಿಸಲ್ಪಟ್ಟಿದ್ದಾನೆ. ಮೂರು ಹಗ್ಗ ಮೂರು ಗುಣ ಸಮುದಾಯಗಳಿಂದ ವಸೆಯಲ್ಪಟ್ಟಿವೆ. ಗುಣಗಳು ದಾರದ ಎಳೆಗಳಂತಿದ್ದರೆ 108 ಎಳೆಗಳ ದಾರದಿಂದ ಒಂದೊಂದು ಹಗ್ಗ ಹುರಿ ಇಟ್ಟು ವಸೆಯಲ್ಪಟ್ಟಿವೆ. ತಾಮಸ, ರಾಜಸ, ಸಾತ್ವಿಕ ಎಂಬ ಮೂರು ಹೆಸರುಗಳಿರುವ ಗುಣಗಳೆಂಬ ಹಗ್ಗವನ್ನು ಆಧ್ಯಾತ್ಮಿಕ ಪರಿಭಾಷೆಯಲ್ಲಿ "ಮಾಯೆ" ಎಂದು ಹೇಳುತ್ತಿದ್ದೇವೆ. ಮಾಯೆ ಎಂಬ ಹಗ್ಗ ಬಹಳ ಬಲವಾದದ್ದು, ಆದ್ದರಿಂದ ಭಗವದ್ಗೀತೆ ವಿಜ್ಞಾನಯೋಗ 14ನೆ ಶ್ಲೋಕದಲ್ಲಿ ಹೀಗೆ ಹೇಳಿದ್ದಾರೆ.

***ಶ್ಲೋ॥ ದೈವೀಹ್ಯೇಷಾ ಗುಣಮಯಿ ಮಮ ಮಾಯಾ ದುರತ್ಯಯಾ।***
***ಮಾಮೇವ ಯೇ ಪ್ರಪದ್ಯಂತೇ ಮಾಯಾ ಮೇತಾಂ ತರಂತಿತೇ॥***

**ಭಾವಾರ್ಥ :– "ದೈವವಾದ ನಾನು ತಯಾರಿ ಮಾಡಿರುವ ನನ್ನ ಮಾಯೆ ದುಸ್ಸಾಧ್ಯವಾದುದು. ನನ್ನನ್ನು ಶರಣುಬೇಡುವ ಮನುಷ್ಯರು ಮಾತ್ರ ನನ್ನ ಮಾಯೆಯನ್ನು ಸುಲಭವಾಗಿ ದಾಟಿಹೋಗಬಲ್ಲರು. ನನ್ನನ್ನು ಆರಾಧಿಸದವರು ನನ್ನ ಮಾಯೆಯನ್ನು ದಾಟಲಾರರು."** ನಾವು ಬಂಧಿಸಲ್ಪಟ್ಟ ಹಗ್ಗವೆಂಬ ಮಾಯೆಯಿಂದ ಹೊರಗೆ ಬೀಳುವುದು ದುಸ್ಸಾಧ್ಯವಾದ ಕೆಲಸವಾಗುವುದು. ಏಕೆಂದರೇ! ಮಾಯೆ ಎನ್ನಲ್ಪಡುವ ಆ ಮೂರು ಹಗ್ಗವನ್ನು ದೇವರೇ ಬಲವಾಗಿ ತಯಾರಿ ಮಾಡಿದ್ದಾನೆ . **ಯಾರಾದರೇ ದೇವರ ಶರಣು ಹೊಂದುವನೋ ಅವನು ಮಾಯೆಯನ್ನು ದಾಟಿ ಹೋಗಬಲ್ಲನು**. ತಾಮಸ, ರಾಜಸ, ಸಾತ್ವಿಕ ಎಂಬ ಮೂರು ಗುಣಗಳಿಂದ ತಯಾರಾದ ಮಾಯೆಯನ್ನು ಜಯಿಸಬೇಕೆಂದರೇ ಮಾಯೆಯನ್ನು ತಯಾರು ಮಾಡಿದ ದೇವರನ್ನು ಶರಣು ಹೊಂದಿ, ಆತನನ್ನು ಆರಾಧಿಸಿದಾಗ ಮಾಯೆ ಮನುಷ್ಯನನ್ನು ತನ್ನ ಬಂಧನಗಳಿಂದ ಬಿಡುಗಡೆ ಮಾಡುತ್ತದೆ. ಮಾಯೆ ತನ್ನಷ್ಟಕ್ಕೆ ತಾನು ಬಿಡುವವರೆಗು ಯಾರೂ ಮಾಯೆಯಿಂದ ಬಿಡಿಸಿಕೊಳ್ಳಲಾರನು. ಮಾಯೆ ಮನುಷ್ಯನನ್ನು ಬಿಡಬೇಕೆಂದರೇ ಮಾಯೆಗೆ ದೇವರ ಆಜ್ಞೆ ಬೇಕು. ದೇವರ ಆಜ್ಞೆ ಇಲ್ಲದೆ ಮಾಯೆ ಯಾರನ್ನೂ ಬಿಡುವುದಿಲ್ಲ.

ದೇವರ ಭಕ್ತನಾದವನೇ ದೇವರಿಗೆ ಇಷ್ಟವಾಗುವನು. ದೇವರಿಗೆ ಯಾರು ಇಷ್ಟವೋ ಅವನನ್ನು ಮಾಯೆ ಬಿಟ್ಟು ದೇವರಬಳಿಗೆ ಕಳಿಸುವುದು. ದೇವರಿಗೆ ಯಾರು ಇಷ್ಟವಿಲ್ಲವೋ ಅವನನ್ನು ಮಾಯೆ ಬಿಡುವುದಿಲ್ಲ. ಅವನು ದೇವರಬಳಿಗೆ ಹೋಗಲಾರನು.

ಪ್ರತಿ ಮನುಷ್ಯ ದೈವಜ್ಞಾನ ತಿಳಿದು ದೇವರನ್ನು ಆರಾಧಿಸಿದಾಗ, ತನಗೆ ತಿಳಿಯದಂತಿರುವ ಬಂಧನಗಳು ಅವಷ್ಟಕ್ಕೆ ಅವೇ ಕಿತ್ತುಹೋಗುವುದು. ನಮಗೆ ತಿಳಿಯದೇ ನಮ್ಮ ತಲೆಯಲ್ಲಿ ಕಟ್ಟಲ್ಪಟ್ಟಿರುವ ನಾವು ನಮಗೆ ತಿಳಿಯದೇನೇ ಬಿಡುಗಡೆ ಹೊಂದಬಲ್ಲೆವು. **'ಬಿಡುಗಡೆಯನ್ನು ಹೊಂದುವುದೇ ಮುಕ್ತಿ'** ಎಂದು ಹೇಳುತ್ತಿದ್ದೇವೆ. ಮನುಷ್ಯನನ್ನು ಕಟ್ಟಿರುವ ಹಗ್ಗ ತಯಾರಾಗಿರುವುದು ಗುಣಗಳ ದಾರದೊಂದಿಗೆಯೇ ಎಂದು ಹೇಳಿದ್ದೇವೆ ಅಲ್ಲವೇ! ಗುಣಗಳ ಎಳೆಗಳನ್ನು ಅನುಸರಿಸಿ ಮೂರು ಹಗ್ಗಕ್ಕೆ ಮೂರು ಹೆಸರುಗಳಿವೆ. ಮೂರು ಹಗ್ಗಗಳು ಮಾಯೆ ಎಂಬ ಕಾಣಿಸದ ಗುಣಗಳಿಂದ ತಯಾರಾದರೂ, ಕರ್ಮವೆಂಬ ಕಪ್ಪನೆ ಬಣ್ಣ ಹೊಂದಿರುವ ಹಗ್ಗವಾಗಿ ಇವೆ. ಮೇಲಿನ ಬಣ್ಣವನ್ನು ಅನುಸರಿಸಿ 'ಕರ್ಮಬಂಧನಗಳು' ಎಂದು ಹೇಳಬಹುದು. ಒಳಗಿನ ಹಗ್ಗದಲ್ಲಿನ ದಾರಗಳನ್ನು ಅನುಸರಿಸಿ 'ಮಾಯೆ ಬಂಧನ' ಎಂದು ಹೇಳಬಹುದು. ಗುಣಗಳಿಂದಲೇ ಕರ್ಮ ಏರ್ಪಡುವುದರಿಂದ ಮೇಲ್ನೋಟಕ್ಕೆ ಕರ್ಮ ಬಣ್ಣ ಹಗ್ಗವಾಗಿ ಕಾಣಿಸುತ್ತಿವೆ. ಮಾಯೆ ಎಂಬ ತಂತುಗಳಿಂದ ಜೋಡಣೆಯಾಗಿ, ಕರ್ಮವೆಂಬ ಕಪ್ಪನೆಯ ಬಣ್ಣವಿರುವ ಬಂಧನಗಳು ಎಂದರೇ ಹಗ್ಗ ಮನುಷ್ಯನನ್ನು ಕಾಣಿಸದೆ ಬಂಧಿಸಿವೆ. ಕಾಣಿಸದೆ ಕಟ್ಟಲ್ಪಟ್ಟಿರುವ ಕರ್ಮವೆಂಬ ಕಪ್ಪನೆಯ ಬಂಧನಗಳನ್ನು ಅಥವಾ ಮಾಯೆ ಎಂಬ ಮೂರು ಬಂಧನಗಳನ್ನು ಇಲ್ಲದೇ ಮಾಡಿಕೊಳ್ಳುವುದಕ್ಕೆ ಸ್ವಲ್ಪ ಕೆಲಸವನ್ನು ಮಾಡಬೇಕಾಗಿದೆ. ಆ ಕೆಲಸವನ್ನು ಮೂರು ಯೋಗಗಳಾಗಿ ಹೇಳಬಹುದು. ಮೂರು ಬಂಧನಗಳನ್ನು ಕಿತ್ತುಕೊಳ್ಳುವುದಕ್ಕೆ ಯೋಗಗಳೆಂಬ ಮೂರು ಕೆಲಸಗಳು ಮಾಡಬೇಕಾಗಿರುವಾಗ, ಆ ಮೂರು ಕೆಲಸಗಳನ್ನು ಹೇಗೆ ಮಾಡಬೇಕೋ ತಿಳಿಯುವುದಕ್ಕೆ ವಿದ್ಯೆ ಅವಶ್ಯ. ಆ ವಿದ್ಯೆಯನ್ನೇ 'ಬ್ರಹ್ಮವಿದ್ಯೆ'

ಎಂದು ಎನ್ನುತ್ತಾರೆ. ಪ್ರಪಂಚ ವಿದ್ಯೆಗಳು ಶಾಸ್ತ್ರಗಳಾಗಿ ಇರುವಂತೆ ಬ್ರಹ್ಮವಿದ್ಯೆ ಸಹ ಶಾಸ್ತ್ರವಾಗಿ ಇರುವುದರಿಂದ ಇದನ್ನು 'ಬ್ರಹ್ಮವಿದ್ಯಾ ಶಾಸ್ತ್ರ' ಎಂದು ಕರೆಯುತ್ತಾರೆ. ಬ್ರಹ್ಮವಿದ್ಯಾ ಶಾಸ್ತ್ರವನ್ನು ಕಲಿತರೆ ಕರ್ಮಬಂಧನಗಳಿಂದ, ಮಾಯೆ ವಶದಿಂದ ಹೊರಗೆ ಬೀಳಬಹುದು.

**ಪ್ರಶ್ನೆ :– ಭೂಮಿಮೇಲೆ ಕೆಲಸಗಳು ಸಾವಿರ, ಲಕ್ಷಗಳಿಂದ ಹಿಡಿದು 'ಕೋಟಿ' ಎಂಬ ದೊಡ್ಡ ಸಂಖ್ಯೆವರೆಗು ಇರಬಹುದೆಂದು ತಿಳಿದುಕೊಂಡಿದ್ದೇವೆ. ಕೋಟಿ ಕೆಲಸಗಳು ಮಾಡುವುದಕ್ಕೆ ಕೋಟಿ ವಿದ್ಯೆಗಳು ಅವಶ್ಯವೆಂದು 'ಕೂಳಿಗಾಗಿ ಕೋಟಿ ವಿದ್ಯೆ'ಗಳು ಎಂಬ ಮಾತನ್ನು ಹೇಳಿದ್ದೇವೆ. ಆದರೇ ಅವೆಲ್ಲವೂ ಪ್ರಪಂಚ ಸಂಬಂಧವಾದ ವಿದ್ಯೆಗಳೆಂದು ಕೂಡಾ ಕೇಳಿದ್ದೇವೆ. ಅಷ್ಟು ವಿದ್ಯೆಗಳನ್ನು ಎಲ್ಲಿ ಕಲಿಸುತ್ತಾರೋ ಹೇಳಿ?**

**ಉತ್ತರ :–** ಇಲ್ಲಿ ನಾವು ಸ್ವಲ್ಪ ತಪ್ಪನ್ನು ಸರಿತಿದ್ದಿಕೊಂಡು ಹೇಳಿಕೊಳ್ಳಬೇಕಾದ ಅವಶ್ಯವಿದೆ. ಅದೇನೆಂದರೇ! ಮನುಷ್ಯ ಕೂಳಿಗಾಗಿ ಕೋಟಿ ಕೆಲಸಗಳು ಮಾಡುತ್ತಿದ್ದಾನೆ. ಆದ್ದರಿಂದ 'ಕೂಳಿಗಾಗಿ ಕೋಟಿ ಕೆಲಸಗಳೆಂದು' ಹೇಳಬೇಕು ಆದರೇ 'ಕೂಳಿಗಾಗಿ ಕೋಟಿ ವಿದ್ಯೆಗಳು' ಎಂದು ಹೇಳಬಾರದು. ಹಾಗೆ ಹೇಳುವುದು ಅಭ್ಯಾಸವಾಗಿಹೋಗಿದೆ. ಭೂಮಿಮೇಲೆ ಕೆಲಸಗಳು ಎಷ್ಟಾದರೂ ಇರಬಹುದು ಆದರೇ ವಿದ್ಯೆಗಳು 64 ಮಾತ್ರವೇ ಇವೆ. ಅವುಗಳನ್ನೇ ಸಂಸ್ಕೃತ ಭಾಷೆಯಲ್ಲಿ **ಚತುಷಷ್ಠೀ ವಿದ್ಯೆಗಳು** ಎಂದು ಹೇಳಿದ್ದಾರೆ. ಅಷ್ಟೇ ಹೊರತು ಎಲ್ಲೂ ಕೋಟಿ ವಿದ್ಯೆಗಳು ಇಲ್ಲವೇಇಲ್ಲ. ಒಂದು ವಿದ್ಯೆ ಎಷ್ಟೋ ಕೆಲಸಗಳನ್ನು ಕಲಿಸುವುದಾಗಿ ಇರುತ್ತದೆ. ಒಂದು ವಿದ್ಯೆಯಿಂದ ಎಷ್ಟೋ ಕಾರ್ಯಗಳನ್ನು ಸಾಧಿಸಬಹುದು. ಆದ್ದರಿಂದ ಕೋಟಿ ಕಾರ್ಯಗಳಿಗಾದರೂ 64 ವಿದ್ಯೆಗಳೇ ಸರಿಹೋಗುವವು.

**ಪ್ರಶ್ನೆ :– ನೀವು ವಿಶ್ವವಿದ್ಯಾಲಯವೆಂದರೇ ಎಲ್ಲಾ ಶಾಸ್ತ್ರಗಳನ್ನು ಬೋಧಿಸುವುದೆಂದು ಹೇಳಿದ್ದೀರ. ಅದರಲ್ಲಿ ಎಷ್ಟು ಶಾಸ್ತ್ರಗಳು ಬೋಧಿಸುತ್ತೀರ?**

**ಉತ್ತರ :–** ಕೂಳಿಗಾಗಿ ಕೋಟಿ ವಿದ್ಯೆಗಳೆಂದು ಹೇಗೆ ಅಭ್ಯಾಸವಾದ ತಪ್ಪನ್ನು ಮಾತನಾಡುತ್ತಿದ್ದೇವೋ! ಹಾಗೆಯೇ ಶಾಸ್ತ್ರಗಳನ್ನು ಬೋಧಿಸುವುದು ವಿಶ್ವವಿದ್ಯಾಲಯವೆಂದು ಅನ್ನುತ್ತಿದ್ದಾರೆ. ದೇಶದಲ್ಲಿ ಎಷ್ಟೋ ವಿಶ್ವವಿದ್ಯಾಲಯಗಳಿವೆ. ಅವುಗಳಲ್ಲಿ ಕೆಲವುದರಲ್ಲಿ ನಾಲಕ್ಕು ಶಾಸ್ತ್ರಗಳನ್ನು, ಕೆಲವುದರಲ್ಲಿ ಐದು ಶಾಸ್ತ್ರಗಳನ್ನು ಬೋಧಿಸುತ್ತಿದ್ದಾರೆ. ಅವೆಲ್ಲವೂ ಪ್ರಪಂಚಕ್ಕೆ ಸಂಬಂಧಿಸಿದ ಶಾಸ್ತ್ರಗಳೇ ಆಗಿವೆ. ಪ್ರಪಂಚ ಶಾಸ್ತ್ರಗಳಿಗೆ ಸಂಬಂಧಿಸಿದ ಬೋಧನೆಗಳನ್ನು ಹೇಳುವವುಗಳನ್ನು ವಿದ್ಯಾಲಯಗಳು ಅಥವಾ ಶಾಸ್ತ್ರ ವಿದ್ಯಾಲಯಗಳು ಎಂದು ಹೇಳಬಹುದು. ಅವು ಎಂದಿಗೂ ವಿಶ್ವವಿದ್ಯಾಲಯುಗಳು ಆಗಲಾರವು. ಶಾಸ್ತ್ರಗಳನ್ನು ಬೋಧಿಸುವವಾದ್ದರಿಂದ ಶಾಸ್ತ್ರವಿದ್ಯಾಲಯಗಳು ಎನ್ನುವುದರಲ್ಲಿ ತಪ್ಪಿಲ್ಲ. ಅವುಗಳಿಗೆ ವಿಶ್ವವಿದ್ಯಾಲಯಗ ಳೆಂಬ ಹೆಸರು ವರ್ತಿಸುವುದಿಲ್ಲ, ಅದರ ಅರ್ಥ ಸರಿಹೋಗುವುದಿಲ್ಲ.

**ಪ್ರಶ್ನೆ :– ವಿಶ್ವವಿದ್ಯಾಲಯ ಎಂದರೆ ಅರ್ಥವೇನಿದೆ?**

**ಉತ್ತರ :–** 'ವಿದ್ಯಾಲಯ' ಎಂದರೇ ವಿದ್ಯೆ ಲಭ್ಯವಾಗುವ ಮಂದಿರವೆಂದು ಅರ್ಥ. ವಿಶ್ವವಿದ್ಯಾಲಯವೆಂದರೇ ವಿಶ್ವಕ್ಕೆ ಸಂಬಂಧಿಸಿದ ವಿದ್ಯೆ ಲಭಿಸುವ ಆಲಯವೆಂದು ಅರ್ಥ. ವಿಶ್ವ ಎಂದರೇ ಪ್ರಪಂಚವೆಂದು ಹೇಳಿಕೊಳ್ಳಬಾರದು. ಪ್ರಪಂಚವೆಲ್ಲಾ ಏಕ ರೂಪದಲ್ಲಿರುವುದನ್ನು 'ವಿಶ್ವ' ಎಂದು ಹೇಳುತ್ತಿದ್ದೇವೆ. ವಿಶ್ವರೂಪವೆಂದರೇ ಪ್ರಪಂಚವೆಲ್ಲಾ ಇರುವ ರೂಪವೆಂದು ಅರ್ಥ. ಪ್ರಪಂಚವೆಲ್ಲಾ ಏಕರೂಪದಲ್ಲಿ ಇರುವವನು ದೇವರೇ. ಆದ್ದರಿಂದ ಆತನನ್ನು ವಿಶ್ವರೂಪದವನು' ಎಂದು ಹೇಳಿದ್ದೇವೆ. ವಿಶ್ವವೆಲ್ಲಾ ಏಕರೂಪವಾಗಿ ಇರುವವನು ಕಾಣಿಸುವುದಿಲ್ಲ. ಆದ್ದರಿಂದ ಕಾಣಿಸದ ದೇವರನ್ನು ಒಬ್ಬನನ್ನೇ ವಿಶ್ವರೂಪದವನೆಂದು ಹೇಳುತ್ತಿದ್ದಾರೆ. ವಿಶ್ವವೆಲ್ಲಾ ಅಣುಅಣುವೂ ವ್ಯಾಪಿಸಿ ಯಾರಿಗೂ ಕಾಣಿಸದವನು ದೇವರೆಂದು ಅರ್ಥ. ದೇವರನ್ನು ಕುರಿತು, ಆತನ ಆಕಾರವನ್ನು ಕುರಿತು ಭಗವದ್ಗೀತೆಯಲ್ಲಿ ವಿಶ್ವರೂಪ ಸಂದರ್ಶನಯೋಗವೆಂದು ಇದೆ. ವಿಶ್ವರೂಪನಾದವನ ದೈವವನ್ನು ಕುರಿತು ತಿಳಿಸುವ ವಿದ್ಯೆ ಎಲ್ಲಿ ಹೇಳಲ್ಪಡುತ್ತಿದೆಯೋ ಅಲ್ಲೇ ವಿಶ್ವವಿದ್ಯಾಲಯ

ಇದೆಯೆಂದು ಹೇಳಬಹುದು. ವಿಶ್ವವಿದ್ಯಾಲಯ ಎಂದರೇ ದೊಡ್ಡ ಭವನಗಳ ಸಮುದಾಯದಿಂದ ಕೂಡಿಕೊಂಡಿರುವುದೆಂದು ಅಂದುಕೊಳ್ಳಬಾರದು. ವಿಶ್ವವಿದ್ಯೆ ಎಲ್ಲಿದ್ದರೂ ಅಲ್ಲಿ ವಿಶ್ವವಿದ್ಯಾಲಯವು ಇದ್ದಹಾಗೆಯೇ ಆಗುತ್ತದೆ. ಚಿಕ್ಕಗುಡಿಸಿಲಿನಲ್ಲಿ ವಿಶ್ವರೂಪನಾದ ದೇವರನ್ನು ಕುರಿತು ಹೇಳುತ್ತಿರುವಾಗ ಆ ಚಿಕ್ಕ ಗುಡಿಸಲನ್ನೇ ವಿಶ್ವವಿದ್ಯಾಲಯವಾಗಿ ತಿಳಿಯಬೇಕು. ದೇವರು ವಿಶ್ವರೂಪದವನಾಗಿ ಇರುತ್ತಾನೆ. ವಿಶ್ವದಲ್ಲಿನ ಪ್ರತಿ ವಸ್ತುವಾಗಿ, ಪ್ರತಿರೂಪವಾಗಿ ಎಲ್ಲದರಲ್ಲೂ, ಎಲ್ಲೆಡೆ ದೇವರಿರುವುದರಿಂದ ಆತನನ್ನು **ಸರ್ವವ್ಯಾಪಿ** ಎಂದೂ, **ಸರ್ವಧಾರಿ** ಎಂದೂ ಹೇಳುತ್ತಿದ್ದಾರೆ.

ವಿಶ್ವವಿದ್ಯಾಲಯದಲ್ಲಿ ದೇವರು ಅಥವಾ ಪರಮಾತ್ಮನನ್ನು ಕುರಿತು ಬೋಧಿಸುವ ಬೋಧನೆಯನ್ನು ಬ್ರಹ್ಮವಿದ್ಯೆ ಎಂದು ಹೇಳುತ್ತಾರೆ. ಬ್ರಹ್ಮವಿದ್ಯೆ ಎಂದರೇ ದೊಡ್ಡವಿದ್ಯೆ ಎಂದು ಅರ್ಥ. ಬ್ರಹ್ಮವಿದ್ಯೆ ಶಾಸ್ತ್ರಬದ್ಧತೆಯಿಂದ ಕೂಡಿಕೊಂಡಿರುವುದರಿಂದ, ಬ್ರಹ್ಮವಿದ್ಯೆಯನ್ನು ಶಾಸ್ತ್ರದೊಂದಿಗೆ ಜೋಡಿಸಿ ಬ್ರಹ್ಮವಿದ್ಯಾ ಶಾಸ್ತ್ರ ಎಂದು ಹೇಳುತ್ತಾರೆ. ಬ್ರಹ್ಮವಿದ್ಯಾ ಶಾಸ್ತ್ರ ಉಳಿದ ಐದು ಶಾಸ್ತ್ರಗಳಿಗಿಂತಲೂ ದೊಡ್ಡದು. ಬ್ರಹ್ಮವಿದ್ಯಾ ಶಾಸ್ತ್ರದಿಂದ ಪ್ರಪಂಚದಲ್ಲಿ ಯಾವ ವಿದ್ಯಾ ಶಾಸ್ತ್ರವು ಸಹ ಸರಿತೂಗುವುದಿಲ್ಲ. ಆದ್ದರಿಂದ ಎಲ್ಲದಕ್ಕಿಂತಲೂ ದೊಡ್ಡದು ಬ್ರಹ್ಮವಿದ್ಯಾ ಶಾಸ್ತ್ರವೆಂದು ಹೇಳುತ್ತಿದ್ದೇವೆ. ಉಳಿದ ಶಾಸ್ತ್ರಗಳು ಐದು ಬ್ರಹ್ಮವಿದ್ಯೆ ಯೊಂದಿಗೆ ಸಮಾನವಲ್ಲ. ಉಳಿದ ಐದು ಶಾಸ್ತ್ರಗಳು ಭೌತಿಕಕ್ಕೆ ಸಂಬಂಧಿಸಿರುವು ವಾದರೇ, ಬ್ರಹ್ಮವಿದ್ಯಾ ಶಾಸ್ತ್ರವು ಅಭೌತಿಕವಾದುದು. ಭೌತಿಕವಾದ ವಿದ್ಯೆಗಳು ಕಾಣಿಸುತ್ತಿರುತ್ತವೆ. ಆದ್ದರಿಂದ ಯಾರಾದರೂ ಅವುಗಳನ್ನು ಕಲಿಯಬಹುದು. ಅಭೌತಿಕವಾದ ಬ್ರಹ್ಮವಿದ್ಯೆಯನ್ನು ಕಲಿಯಬೇಕೆಂದರೇ ಮುಖ್ಯವಾಗಿ ವಿಶ್ವಾಸ ಹೆಚ್ಚಾಗಿರಬೇಕು.

**ಪ್ರಶ್ನೆ :– ಆಧ್ಯಾತ್ಮಿಕ ವಿದ್ಯೆಯೇ ಬ್ರಹ್ಮವಿದ್ಯೆ ಎಂದು ನಾವು ಅಂದುಕೊಳ್ಳುತ್ತಿದ್ದೇವೆ ನಿಜವೇನಾ?**

**ಉತ್ತರ :–** ಬ್ರಹ್ಮವಿದ್ಯೆ ಎಂದರೇ ದೊಡ್ಡ ವಿದ್ಯೆಯೆಂದು ಹೇಳಿಕೊಂಡಿದ್ದೇವೆ.

ಪ್ರಪಂಚದಲ್ಲಿ ಯಾರಾದರೇ ದೊಡ್ಡದಾಗಿದ್ದಾನೋ ಅವನನ್ನು ಕುರಿತು ಹೇಳಿಕೊಳ್ಳುವ ವಿದ್ಯೆಯೇ ಬ್ರಹ್ಮವಿದ್ಯೆ ಎಂದು ಎನ್ನುತ್ತಿದ್ದೇವೆ. ದೇವರನ್ನು ಕುರಿತಾದ ವಿದ್ಯೆಯನ್ನು ಬ್ರಹ್ಮವಿದ್ಯೆ ಎಂದೂ, ದೇವರನ್ನು ಕುರಿತು ತಿಳಿಸುವ ಶಾಸ್ತ್ರವನ್ನು ಬ್ರಹ್ಮವಿದ್ಯಾ ಶಾಸ್ತ್ರವೆಂದೂ ಹೇಳುವುದು ನಡೆಯುತ್ತಿದೆ. ಇಲ್ಲಿ ನಿಮ್ಮ ಪ್ರಶ್ನೆ ಆಧ್ಯಾತ್ಮಿಕ ವಿದ್ಯೆಯೇ ಬ್ರಹ್ಮವಿದ್ಯೇನಾ? ಎಂದು ಕೇಳಿದ್ದೀರ. ನಿಜ ಹೇಳಬೇಕಾ! ಸುಳ್ಳು (ಅಬದ್ಧ) ಹೇಳಬೇಕಾ!! ಎಂದು ನಾನು ಸಂಶಯಿಸುತ್ತಿದ್ದೇನೆ. ಏಕೆಂದರೇ! ನಾವು ಇಲ್ಲಿಯವರೆಗು ಸುಳ್ಳು (ಅಬದ್ಧ) ಹೇಳಿದರೂ ಅದು ನಿಜವೇ. ಅಂದರೇ ನಾನು ನಿಜವಾಗಿರುವ ಸುಳ್ಳನ್ನು ಹೇಳಿದ್ದೇನೆಂದು ಒಂದು ವಿಧವಾಗಿ ಹೇಳಬಹುದು. ನಾನು ಹೇಳಿರುವ ಸುಳ್ಳನ್ನೇ ನಿಜವೆಂದು ಕೂಡಾ ಹೇಳಬಹುದು. ಈ ನನ್ನ ಮಾತುಗಳು ನಿಮ್ಮನ್ನು ಸ್ವಲ್ಪ ಅನಿಶ್ಚಿತಕ್ಕೆ ಗುರಿಮಾಡುವುದು. ನಿಮಗೆ ನಿಜ ತಿಳಿಯಬೇಕೆಂದರೇ ಮೊದಲು ಅನಿಶ್ಚಿತಕ್ಕೆ ಗುರಿಯಾಗುವುದೇ ಒಳ್ಳೆಯದೆಂದು ನಾನು ಅಂದುಕೊಳ್ಳುತ್ತಿದ್ದೇನೆ. ಈಗ ಹೇಳಲಾಗುವ ವಿಷಯಗಳನ್ನು ಜಾಗೃತಿ ವಹಿಸಿ ಕೇಳಿರಿ.

ದೇವರು ತನ್ನ ವಿಷಯವು ಯಾವ ಮಾನವನಿಗೂ ತಿಳಿದಿಲ್ಲವೆಂದು ದೈವಗ್ರಂಥಗಳಲ್ಲಿ ಹೇಳಿದ್ದಾನೆ. **ದೇವರ ವಿಷಯವು ದೇವರಿಗೆ ಹೊರತು ಭೂಮಿಮೇಲೆ ಯಾವ ಮನುಷ್ಯನಿಗೂ ತಿಳಿದಿಲ್ಲ**. ದೇವರು ಯಾರೊಂದಿಗೂ ಮಾತನಾಡುವವನಲ್ಲ. ಆತನು ನಾಮ, ರೂಪ, ಕ್ರಿಯೆಗಳಿಲ್ಲದವನು. ಅಂಥವನು ಯಾರಿಗೂ ಕಾಣಿಸುವುದು ನಡೆಯುವುದಿಲ್ಲ. ಯಾರೂ ಆತನನ್ನು ಕುರಿತು ಹೇಳುವುದಕ್ಕೆ ಅರ್ಹನಲ್ಲ. ಆತನು ಯಾರ ಊಹೆಗು ತಿಳಿಯದವನು. ದೇವರು ಎಂದರೇ ತಿಳಿಯಲ್ಪಡುವವನಲ್ಲ ಎಂದು ಅರ್ಥ. ದೇವರು ಯಾವ ನಿಯಮ ನಿಬದ್ಧತೆ ಇಲ್ಲದವನು. ಯಾವ ಶಾಸ್ತ್ರವು ಆತನನ್ನು ನಿರ್ಧಾರಿಸಿ ಹೇಳಲಾರವು. ಆತನನ್ನು ಕುರಿತು ಹೀಗೆ ಹಾಗೆ ಎಂದು ಹೇಳುವುದಕ್ಕೆ ಅವಕಾಶವಿಲ್ಲ. ಅಂಥವನನ್ನು ಕುರಿತು ಶಾಸ್ತ್ರಗಳು ಹೇಳಬಲ್ಲವಾ? ಊಹಿಸಿ ಹೇಳಲಾಗುತ್ತದಾ? ಯಾವುದರಿಂದಲೂ ಸಾಧ್ಯವಾಗುವುದಿಲ್ಲ ಎಂದು ಹೇಳುವುದೇ ಒಳ್ಳೆಯದು.

ಆದರೇ ಇಲ್ಲಿಯವರೆಗು ಅನೇಕಕಡೆ, ಅನೇಕ ಸಂದರ್ಭಗಳಲ್ಲಿ ದೇವರನ್ನು ಕುರಿತು ಹೇಳಿದ್ದೇವೆ. ಬ್ರಹ್ಮವಿದ್ಯೆಯಿಂದ ದೇವರು ತಿಳಿಯುವನೆಂದು, ಪ್ರಪಂಚದಲ್ಲಿ ದೇವರೇ ದೊಡ್ಡವನೆಂದು, ದೇವರು ಸೃಷ್ಠಿಕರ್ತನೆಂದು, ದೇವರು ಎಲ್ಲರಿಗೂ ತಂದೆಯೆಂದೂ ಅನೇಕ ವಿಧಗಳಾಗಿ ಅನೇಕಕಡೆಗಳಲ್ಲಿ ದೇವರನ್ನು ಕುರಿತು ಹೇಳಿದ್ದೇವೆ. ಹಾಗೆ ಹೇಳುವುದು ಎಲ್ಲಾ ಸತ್ಯವಲ್ಲ. ಹಾಗೆ ದೇವರನ್ನು ಕುರಿತು ಹೇಳುವುದಾದರೇ ಆತನು ನಮ್ಮ ಊಹೆಗಾಗಲೀ, ನಮ್ಮ ಜ್ಞಾನಕ್ಕಾಗಲೀ ತಿಳಿಯುವವನಾಗುತ್ತಾನೆ. ವಾಸ್ತವವಾಗಿ ದೇವರು ಯಾವ ಜ್ಞಾನಕ್ಕಾಗಲೀ, ಯಾರ ಊಹೆಗಾಗಲೀ ತಿಳಿಯುವವನಲ್ಲ. ಯಾರೂ ಆತನನ್ನು ಯಾವುದರೊಂದಿಗೂ ಹೋಲಿಸಿ ಹೇಳಲಾರರು.

ಈ ನನ್ನ ಮಾತುಗಳು ಕೇಳಿದವರಿಗೆ ಯಾರಿಗಾದರೂ ತಲೆಕೆಟ್ಟಷ್ಟು ಕೆಲಸವಾಗುವುದು. ಇಲ್ಲಿಯವರೆಗು ದೇವರ ಜ್ಞಾನವನ್ನು ಪ್ರಪಂಚದಲ್ಲಿ ಎಲ್ಲರಿಗಿಂತಲೂ ಚೆನ್ನಾಗಿ ಬೋಧಿಸಿರುವ ಈತನೇ ಯಾಕೆ ಹೀಗೆ ಮಾತನಾಡು ತ್ತಿದ್ದಾನೆಂದು ಅನಿಸುತ್ತದೆ. ನಾನು ಯಾವುದೋ ಪೈತ್ಯದಿಂದ ಹಾಗೆ ಮಾತನಾಡಲಿಲ್ಲ. ಒಂದು ವಿಧವಾಗಿ ಎಲ್ಲರಿಗೂ ಅಸತ್ಯವಾಗಿ ಕಾಣಿಸಿದರೂ ಸತ್ಯವನ್ನೇ ಹೇಳುತ್ತಿದ್ದೇನೆ. ಇದಕ್ಕು ಮೊದಲು ಹೇಳಿರುವುದು ಸತ್ಯವಲ್ಲವೆಂದು ನಾನು ಹೇಳಿದರೂ ಅದು ಸಹ ನಿಜವೇ ಎಂದು ಹೇಳುತ್ತಿದ್ದೇನೆ. ಎರಡು ನಿಜಗಳು ಹೇಗಿರುತ್ತದೆ. ಯಾವುದೋ ಒಂದು ಸತ್ಯ, ಮತ್ತೊಂದು ಅಸತ್ಯವಾಗಿ ಇರುತ್ತದೆ ಅಲ್ಲವೇ! ಎಂದು ಕೇಳಿದರೇ ನನ್ನ ಮಾತುಗಳನ್ನು ಚೆನ್ನಾಗಿ ಕೇಳಿ, ಚೆನ್ನಾಗಿ ಯೋಚಿಸಿದರೇನೇ ನಿಮಗೆ ಅರ್ಥವಾಗಬಲ್ಲದೆಂದು ಹೇಳುತ್ತಿದ್ದೇನೆ. ಎಲ್ಲಿ ಏನು ಹೇಳಿದರೂ ಅದು ದೇವರ ವಿಷಯವೆಂದೇ ಹೇಳಬೇಕು. ಜ್ಞಾನದಿಂದ ತಿಳಿಯುವವನು ದೇವರೇ ಎಂದು ಹೇಳಬೇಕು. ಜ್ಞಾನದಿಂದ ದೇವರು ತಿಳಿಯುವುದಿಲ್ಲ, ಆದರೂ ಹಾಗೆಯೇ ಹೇಳಬೇಕು. ಎಲ್ಲರಿಗೂ ತಂದೆ ದೇವರೆಂದು ಹೇಳಿದರೂ ಆಗ ಆ ಮಾತು ಕೇಳಬೇಕು. ವಾಸ್ತವವಾಗಿ **'ದೇವರಿಗೆ ಸಂತತಿ ಇಲ್ಲ, ದೇವರು ಯಾರ ಸಂತತಿಯಲ್ಲ'** ಎಂಬ ದೈವಗ್ರಂಥದಲ್ಲಿನ ವಾಕ್ಯದ ಪ್ರಕಾರ

ದೇವರು ಎಲ್ಲರಿಗೂ ತಂದೆ ಎಂಬಮಾತು ಅಸತ್ಯವೇ ಆಗುತ್ತದೆ. ಅಸತ್ಯವೆಂದು ತಿಳಿದರೂ ನಾನು ಎಲ್ಲರಿಗೂ ತಂದೆ ದೇವರೇ ಎಂದು ಹೇಳಿದ್ದೇನೆ. ಹಾಗೆ ಹೇಳುವುದಕ್ಕೆ ಕಾರಣ ಏನೆಂದರೇ!

ಗತದಲ್ಲಿ ಕೂಡಾ ನಾನು ಸಂದರ್ಭಾನುಸಾರವಾಗಿ ಒಂದುಮಾತು ಹೇಳಿದ್ದೇನೆ. 'ದೇವರು ಏನೂ ಅಲ್ಲದವನಾದರೂ ನಾವು ದೇವರನ್ನೇ ಹೇಳುತ್ತಿದ್ದೇವೆ' ಎಂದು ಹೇಳಿದ್ದೇನೆ. ದೇವರು ನಾವು ಹೇಳುವ ವಿಷಯಕ್ಕೆ ಸಂಬಂಧ ಇಲ್ಲದಿದ್ದರೂ ಆತನ ಗೌರವಾರ್ಥ ಆತನನ್ನೇ ಹೇಳಬೇಕೆಂದು ಹೇಳಿದ್ದೇವೆ. ದಂಪತಿಗಳಿಗೆ ಸಂತಾನ ಕೊಡುವವನು ದೇವರೆಂದು ಹೇಳುವುದು ಅಸತ್ಯವಾದ ಮಾತು. ಆತನು ಯಾವ ಕೆಲಸವನ್ನು ಮಾಡದವನಾಗಿ ಇದ್ದಾನೆ ಎನ್ನುವುದೇ ಸತ್ಯ. ಆದರೂ ಅಸತ್ಯವನ್ನು ಹೇಳುತ್ತಿದ್ದೇವೆ. ದೇವರ ಗೌರವಾರ್ಥ ಎಲ್ಲದಕ್ಕು ಆತನೇ ಕಾರಣ, ಎಲ್ಲದಕ್ಕು ಆತನೆ ದೊಡ್ಡವನು, ಎಲ್ಲದಕ್ಕು ಆತನೇ ಮಾಡುತ್ತಿದ್ದಾನೆ ಎಂದು ಹೇಳುತ್ತಿದ್ದೇವೆ. ಹಾಗೆ ಹೇಳುವುದರಲ್ಲಿ ತಪ್ಪಿಲ್ಲ. ದೇವರನ್ನು ಹಾಗೆಯೇ ಗೌರವಿಸಿ ಹೇಳಬೇಕು. ಆದರೇ ವಾಸ್ತವವಾಗಿ ಆತನಿಗೆ ಏನೂ ಸಂಬಂಧವಿಲ್ಲವೆಂದು ತಿಳಿದಿರಬೇಕು. ಅಜ್ಞಾನ ಪ್ರಜೆಗಳಿಗೆ ದೇವರನ್ನು ಹಾಗೆ ಹೇಳಿದರೇನೇ ಅವರು ದೇವರನ್ನು ಗೌರವಿಸುತ್ತಾರೆ. ಗೌರವ ಭಾವನೆ ಹೊಂದಿರುತ್ತಾರೆ. ನಾನು ಹೇಳುವ ಬೋಧನೆಯಲ್ಲಿ ದೇವರನ್ನು ದೊಡ್ಡದಾಗಿ ಹೇಳುತ್ತಿರುತ್ತೇನೆ. ಎಲ್ಲರನ್ನೂ ಆಡಿಸುವವನು ದೇವರೇ ಎಂದು ಹೇಳುತ್ತಿರುತ್ತೇನೆ. ಹಾಗೆ ಹೇಳುವುದು ನನ್ನ ಕರ್ತವ್ಯ. ಆದರೇ ದೇವರು ಹಾಗೆ ಇಲ್ಲ ಎಂದು ನನಗೆ ತಿಳಿದು ಮೇಲ್ನೋಟಕ್ಕೆ ಹಾಗೆ ಹೇಳುತ್ತಿದ್ದೇನೆ. ನನ್ನೊಳಗೆ ದೇವರ ಬಗ್ಗೆ ಒಂದು ಭಾವನೆ ಇರುವಾಗ, ಹೊರಗೆ ಬೇರೊಂದು ಭಾವನೆಯನ್ನು ಹೇಳುತ್ತಿರುತ್ತೇನೆ. ತಪ್ಪದೇ ಹಾಗೆಯೇ ಹೇಳಬೇಕು. ಕೇಳಿಸಿಕೊಳ್ಳುವವರು ಪೂರ್ತಿಯಾಗಿ ಸಂಪೂರ್ಣ ಜ್ಞಾನಿಗಳಾದರೇ ಆಗ ಹಾಗೆ ಹೇಳಬೇಕಾದ ಅವಶ್ಯವಿಲ್ಲ. ಆಗ ನನ್ನಲ್ಲಿರುವ ಭಾವನೆಯನ್ನು ಇರುವುದು ಇದ್ದಹಾಗೆ ಹೇಳಬಹುದು. ನೀವು ಸ್ವಲ್ಪ ಜ್ಞಾನ ತಿಳಿದು ಆಧ್ಯಾತ್ಮಿಕ ವಿದ್ಯೆಯನ್ನೇ ಬ್ರಹ್ಮವಿದ್ಯೆ

ಎಂದು ಅಂದುಕೊಳ್ಳುತ್ತಿದ್ದೇವೆ ಎಂದು ಕೇಳಿದ್ದೀರ ಆದಕಾರಣ ಈಗ ನಿಮಗೆ ಸತ್ಯವನ್ನೇ ಹೇಳಬೇಕಾಗಿ ಬಂದಿದೆ.

**ಪ್ರಶ್ನೆ :– ದೇವರು ನಮ್ಮನ್ನು ರಕ್ಷಿಸುವನು ಎಂದು ನೀವು ಹೇಳಿದ್ದೀರೆಂದುಕೊಳ್ಳಿ, ಆಗ ನಿಜ ಹೇಳಿದಂತಾಗುತ್ತದಾ, ಸುಳ್ಳು ಹೇಳಿದಂತಾಗುತ್ತದಾ? 'ದೇವರು ಕರುಣಾಮಯನು, ದಯಾ ಶೀಲನು' ಎಂದು ಗ್ರಂಥದಲ್ಲಿಯೇ ಬರೆದಿದ್ದೀರ ಅಲ್ಲವೇ!**

**ಉತ್ತರ :–** ದೇವರಿಗೆ ಪ್ರಾಥಮಿಕ ಧರ್ಮಗಳಿವೆ. ಆ ಧರ್ಮಗಳ ಪ್ರಕಾರವೇ ಇರುತ್ತಾನೆ. ಅವುಗಳನ್ನು ಅತಿಕ್ರಮಿಸಿ ಏನೂ ಮಾಡುವವನಲ್ಲ. ಗ್ರಂಥದಲ್ಲಿ ಬರೆದಿರುವುದು ವಾಸ್ತವವೆ, ಅಷ್ಟು ಮಾತ್ರಕ್ಕೆ ನಾವು ಅಲ್ಲಿ ಬರೆದಿರುವುದನ್ನು ಸರಿಯಾಗಿ ಅರ್ಥ ಮಾಡಿಕೊಂಡಿದ್ದೇವೆಂದು ಯಾಕೆ ಅಂದುಕೊಳ್ಳಬೇಕು? ಗ್ರಂಥದಲ್ಲಿ ಬರೆದಿರುವುದನ್ನು ಸರಿಯಾಗಿ ಅರ್ಥಮಾಡಿಕೊಳ್ಳದೇ ಹೋಗಿರುವು ದರಿಂದ ನಾವು ತಪ್ಪುದಾರಿ ಹಿಡಿದಿದ್ದೇವೆ. ದೇವರು ತನ್ನ ಪ್ರಾಥಮಿಕ ಧರ್ಮದ ಪ್ರಕಾರ ಕ್ರಿಯಾ ರಹಿತನಾಗಿದ್ದಾನೆ. ಆದ್ದರಿಂದ ಆತನು ಏನು ಮಾಡುವವನಲ್ಲ. **"ಆತನು ಯಾರನ್ನೂ ರಕ್ಷಿಸುವುದಿಲ್ಲ. ಆತನಿಗೆ ದಯೆ ಇಲ್ಲ. ಕರುಣೆ ಅಷ್ಟಕ್ಕೂ ಇಲ್ಲ".** ಗ್ರಂಥದಲ್ಲಿ ದಯಾಮಯನು ಎಂದು ಇದೆ ಅಲ್ಲವೇ! ಎಂದು ನೀವು ಕೇಳಬಹುದು. ಅದಕ್ಕೆ ನನ್ನ ಉತ್ತರ ಹೀಗಿದೆ. ದೈವಗ್ರಂಥದಲ್ಲಿ ಸಹ ಆ ಮಾತನ್ನು ಹೇಳಿದ್ದಾರೆ. 'ದೇವರು ದಯಾಶೀಲನು' ಎಂದು ಹೇಳಿದಾಗ, ಆತನು 'ಆಪತ್ತಿನಿಂದ ರಕ್ಷಿಸುವನು' ಎಂದು ಹೇಳಿದಾಗ ಆ ಮಾತುಗಳು ದೇವರ ಪ್ರಾಥಮಿಕ ಹಕ್ಕಿಗೆ ಧಕ್ಕೆ ತರುತ್ತಿವೆ. ಗೌರಾವಾರ್ಥವಾಗಿ ಹಾಗೆ ಹೇಳಿದರೂ ಘರವಾಗಿಲ್ಲ ಆದರೇ, ಅದೇ ಸತ್ಯವೆಂದು ಹೇಳಿದರೇ ಹೇಳಿದವನು ದೈವ ಧರ್ಮಕ್ಕೆ ವಿರೋಧಿ ಯಾಗುವನು. ದೈವಗ್ರಂಥಕ್ಕೆ ಬೆಲೆಕೊಡುವವರು ಅದರಲ್ಲಿನ ಸತ್ಯವನ್ನು ತಿಳಿಯಬೇಕೆ ಹೊರತು, ಅಪಾರ್ಥ ಮಾಡಿಕೊಳ್ಳಬಾರದು. ದೇವರೆಂಬ ಮಾತನ್ನು ಕೇಳಿದಾಗ ಆತನನ್ನು ಒಬ್ಬನಾಗಿ ತಿಳಿಯಬಾರದು. ದೇವರು ಮೂವರೊಂದಿಗೆ ಬೆರೆತಿರುವವ ನೆಂದು ಜ್ಞಾಪಕ ಮಾಡಿಕೊಳ್ಳಬೇಕು. ದೇವರು ಮೂರು ಭಾಗಗಳಾಗಿ ಇದ್ದಾನೆಂದು ತಿಳಿದಾಗ ಅವನು ಜ್ಞಾನಿ ಆದಂತೆಯೇ ಎಂದು ಹೇಳಬಹುದು.

ಭಗವದ್ಗೀತೆಯಲ್ಲಿ ಪುರುಷೋತ್ತಮ ಪ್ರಾಪ್ತಿ ಯೋಗದಲ್ಲಿ 16, 17 ಶ್ಲೋಕಗಳಲ್ಲಿ ಹೇಳಿರುವ ಪ್ರಕಾರ 'ದೇವರು ಏಕ ಸ್ವರೂಪದವನಲ್ಲ. ಆತನು ಇನ್ನೊಂದು ಇಬ್ಬರೊಂದಿಗೆ ಬೆರೆತಿದ್ದಾನೆ.' ಈಗ ಅಸಲು ವಿಷಯಕ್ಕೆ ಬರೋಣ. 'ದೇವರು ದಯಾಮಯನು' ಎಂಬಮಾತು ಆ ಮೂವರಲ್ಲಿ ದೇವರಾಗಿ ಇರುವವನಿಗಾ? ಅಂದರೇ ದೇವರ ಧರ್ಮಗಳ ಪ್ರಕಾರವಾದರೇ ದೇವರಿಗೆ ಆ ಮಾತು ಅನ್ವಯಿಸುವುದಿಲ್ಲ ಎಂದು ಹೇಳಬಹುದು. ಆ ಮೂವರಲ್ಲಿ ಇನ್ನೂ ಇಬ್ಬರನ್ನು ಕುರಿತು ನೋಡಿದರೇ ಒಬ್ಬರು ಜೀವಾತ್ಮವಾದರೇ, ಇನ್ನೊಬ್ಬರು ಆತ್ಮವಾಗಿ ಇದ್ದಾನೆ. ದೇವರು ಧರ್ಮದ ಪ್ರಕಾರ ಯಾವುದೂ ಅಲ್ಲದವನು, ಯಾವುದೂ ಮಾಡದವನು. ಎರಡನೆಯನವನಾದ ಆತ್ಮ ದೇವರ ನಂತರ ಇರುವವನಾದರೇ, ಆತ್ಮ ನಂತರ ಇರುವವನು ಜೀವಾತ್ಮ. ಮೊದಲನೆಯವನು ದೇವರಾದರೇ, ಎರಡನೆಯವನು ಆತ್ಮವಾಗಿರುವಾಗ, ಮೂರನೆಯವನು ಜೀವಾತ್ಮವಾಗಿ ಇದ್ದಾನೆ. ದೇವರು ತನ್ನ ಧರ್ಮದ ಪ್ರಕಾರ ಏನೂ ಮಾಡುವುದಿಲ್ಲ. ಜೀವಿಯು ತನ್ನ ಧರ್ಮದ ಪ್ರಕಾರ ಏನೂ ಮಾಡಲಾರದವನು. ಈ ಲೆಕ್ಕದ ಪ್ರಕಾರ ದೇವರಲ್ಲಿನ ಎರಡು ಭಾಗಗಳು ಎಂದರೇ ದೇವರು, ಜೀವಿಯು ಇಬ್ಬರು ಏನೂ ಮಾಡದೇ ಸುಮ್ಮನೇ ಇರುವವರಾಗಿ ಇದ್ದಾರೆ. ಆದರೇ 'ದೇವರು ರಕ್ಷಿಸುವನು' ಎಂಬ ದೈವಗ್ರಂಥದಲ್ಲಿನ ಮಾತು ವ್ಯರ್ಥವಾಗದೇ 'ರಕ್ಷಿಸುವವನು ಮತ್ತು ಶಿಕ್ಷಿಸುವವನಾಗಿ' ಆತ್ಮ ಒಬ್ಬನಿರುವನು. ಆತ್ಮವೇ ಎಲ್ಲಾ ಕೆಲಸಗಳನ್ನು ಮಾಡುತ್ತಿದೆ. ದೇವರ ಕಡೆಯಿಂದ ಹೇಳಿರುವ ಮಾತುಗಳೆಲ್ಲವನ್ನೂ ಆತ್ಮ ನೆರವೇರಿಸುತ್ತಿದೆ.

ದೇವರು ಮಾನವರಿಗೆ ತಂದೆ ಎಂದರೂ, ಆ ಮಾತಿಗೆ ದೇವರು ತಂದೆಯಲ್ಲ ಆದರೇ, ದೇವರಲ್ಲಿ ಭಾಗವಾಗಿರುವ ಆತ್ಮ ತಂದೆಯಾಗಿದ್ದಾನೆಂದು ಹೇಳಬಹುದು. ಪ್ರಪಂಚದಲ್ಲಿ ಆತ್ಮ ಮಾಡದ ಕೆಲಸವಂತೂ ಏನೂ ಇಲ್ಲ, ಆತ್ಮ ಎಲ್ಲವೇಳೆಯಲ್ಲೂ ಕೆಲಸ ಮಾಡುತ್ತಿದೆ. ಆತ್ಮ ಸರ್ವಕಾರ್ಯಗಳನ್ನು ಮಾಡುತ್ತಿದೆಯೆಂದು ನನಗೆ ತಿಳಿದರೂ, ನಾನು ಇತರರಿಗೆ ಜ್ಞಾನವನ್ನು

ಹೇಳುತ್ತಿರುವಾಗ ಆತ್ಮ ಮಾಡುವ ಕೆಲಸಗಳನ್ನು ದೇವರೇ ಮಾಡುತ್ತಿದ್ದಾನೆಂದು ದೇವರ ಗೌರವಾರ್ಥವಾಗಿ ಹೇಳುತ್ತಿದ್ದೇವೆ. ಈ ವಿಧವಾಗಿ ಹೇಳುತ್ತಾ ಗ್ರಂಥಗಳಲ್ಲಿ ಕೂಡಾ ಆತ್ಮ ಮಾಡುವ ಕೆಲಸಗಳನ್ನು ಹೇಳದೆ ಅವುಗಳನ್ನೇ ದೇವರು ಮಾಡುತ್ತಿದ್ದಾನೆಂದು ಹೇಳಿದ್ದೇನೆ. ಹಾಗೆ ಯಾಕೆ ಹೇಳಬೇಕು? ಎಲ್ಲಾ ಆತ್ಮವೇ ಮಾಡುತ್ತಿದೆ ಎಂದು ಯಾಕೆ ಹೇಳಬಾರದು? ಎಂದು ಯಾರಾದರೂ ಕೇಳಿದರೇ ಅದಕ್ಕೆ ಈ ವಿಧವಾಗಿ ಸಮಾಧಾನ ಹೇಳಬೇಕು.

ಆತ್ಮ ಅಡಗಿ ಇರುವವನು. ಎಲ್ಲೂ ಹೊರಗೆ ಕಾಣಬಾರದು. ಆತ್ಮ ಹೊರಗೆ ತಿಳಿಯದಂತೆ ಇರಬೇಕು. ಹೊರಗೆ ತಿಳಿಯುವವರು ಜೀವಿಯು, ದೇವರು ಇಬ್ಬರು ಮಾತ್ರ. ದೇವರು ಯಾವ ಕೆಲಸವನ್ನೂ ಮಾಡುವುದಿಲ್ಲ. ಹಾಗೆಯೇ ಜೀವಿಯು ಯಾವ ಕಾರ್ಯವನ್ನು ಮಾಡುವುದಕ್ಕೆ ಅನರ್ಹನು. ದೇವರು ಕೈಲಾದರೂ ಮಾಡುವುದಿಲ್ಲ. ಜೀವಿಯು ಕೈಲಾಗದವನಾಗಿದ್ದು ಯಾವ ಕಾರ್ಯವನ್ನು ಮಾಡುವುದಿಲ್ಲ. ಆದರೇ ನಾವು ನಮಗೆ ತಿಳಿದ ಜ್ಞಾನದ ಪ್ರಕಾರ ದೇವರ ಗೌರವಾರ್ಥವಾಗಿ ದೇವರು ಮಾಡುತ್ತಿದ್ದಾನೆಂದು ಹೇಳುತ್ತಿದ್ದೇವೆ. ಹಾಗೆಯೇ ನಮಗೆ ತಿಳಿಯದ ಜ್ಞಾನದ ಪ್ರಕಾರ, ತಿಳಿದಿರುವ ಅಜ್ಞಾನದ ಪ್ರಕಾರ ಮಾಡದ ಜೀವಿಯನ್ನು ಕೆಲಸಗಳನ್ನು ಮಾಡಿದ್ದಾನೆಂದು ಹೇಳುತ್ತಿದ್ದೇವೆ. ಜೀವಿಯು ಮತ್ತು ದೇವರು ಇಬ್ಬರು ಏನೂ ಮಾಡುವುದಿಲ್ಲ. ಆದರೇ ಅವರಿಬ್ಬರೂ ಕಾರ್ಯಗಳನ್ನು ಮಾಡಿದಂತೆಯೇ ಹೇಳಲ್ಪಡುತ್ತಿದ್ದಾರೆ. ಅಸಲು ಸೂತ್ರಧಾರಿ, ಎಲ್ಲಾ ಕಾರ್ಯಗಳು ಮಾಡುವವನು ಆತ್ಮ ಇರುವಾಗ ಆತ್ಮವನ್ನು ಯಾರೂ ಅಂದುಕೊಳ್ಳುವುದೂ ಇಲ್ಲ. ಆತನು ಇದ್ದರೂ ಇಲ್ಲದಂತೆಯೇ! ಯಾರಿಗೂ ತಿಳಿಯದವನಾಗಿ ಇದ್ದಾನೆ. ಆದ್ದರಿಂದ ಆತ್ಮ ಶರೀರದಲ್ಲಿ ಅಡಗಿದ್ದು ಯಾರಿಗೂ ತಿಳಿಯದೇ ತನ್ನ ಕಾರ್ಯವನ್ನು ತಾನು ಮಾಡುತ್ತಿದೆ. ದೇವರು ಮಾಡುತ್ತಿದ್ದಾನೆ ಎಂದು ಎಲ್ಲಾದರೆ ಹೇಳಿದ್ದೇವೋ ಅಲ್ಲಿ ಯಾರಿಗೂ ತಿಳಿಯದೇ ಮಾಡುವವನು ಆತ್ಮವೇ. ಆದರೇ ಆತ್ಮ ಮಾಡುವ ಕೆಲಸಗಳೆಲ್ಲವನ್ನೂ ಜೀವಿಯು ಅಜ್ಞಾನದಿಂದ ನಾನೇ ಮಾಡುತ್ತಿದ್ದೇನೆಂದು ಅನ್ನುತ್ತಿದ್ದಾನೆ. ಹಾಗೆಯೇ ಆತ್ಮ ಮಾಡುವ

ಕಾರ್ಯಗಳೆಲ್ಲವನ್ನೂ ಜ್ಞಾನದಿಂದ ಜ್ಞಾನಿಗಳೆಲ್ಲರೂ ದೇವರೇ ಮಾಡುತ್ತಿದ್ದಾನೆಂದು ಹೇಳುತ್ತಿದ್ದಾರೆ.

ಆತ್ಮ ಮಾಡುವ ಕೆಲಸಗಳನ್ನು ದೇವರು ಮಾಡಿದ್ದಾನೆಂದು ಹೇಳುವುದು ದೇವರನ್ನು ಗೌರವಿಸುವ ನಿಮಿತ್ತವೇ ಎಂದು ಹೇಳಿದ್ದೇವೆ. ಹಾಗೆ ಹೇಳುವುದು ಜ್ಞಾನವೇ ಆಗುವುದು ಅಜ್ಞಾನವಲ್ಲ. ಮನೆಯಲ್ಲಿ ಮಗ ದೊಡ್ಡಸ್ತಿಕೆ ಮಾಡುತ್ತಿದ್ದರೂ ದೊಡ್ಡಸ್ತಿಕೆಯೆಲ್ಲಾ ನನ್ನ ತಂದೆಯದೇ ಎಂದು ಹೇಳುವುದು ಒಳ್ಳೆಯದೇ ಅಲ್ಲವೇ! ಹಾಗೆಯೇ ಆತ್ಮಕಾರ್ಯಗಳನ್ನು ಮಾಡುತ್ತಿದ್ದರೂ ಪರಮಾತ್ಮ ಎಂದು ಹೇಳುವುದು ದೇವರನ್ನು ಗೌರವಿಸಿದಂತೆಯೇ ಅಲ್ಲವೇ! ಆತ್ಮ ಕೆಲಸಗಳು ಮಾಡುತ್ತಿದ್ದರೂ, ಜೀವಿಯು ನಾನು ಮಾಡಿದ್ದೇನೆಂದು ಹೇಳಿಕೊಳ್ಳುವುದು ಜೀವಿಯದ್ದು ಪೂರ್ತಿ ಅಜ್ಞಾನವಾಗುವುದು. ಆತ್ಮವೇ ಕಾರ್ಯಗಳನ್ನು ಮಾಡುತ್ತಿದೆ ಎಂದು ಜೀವಿಗೆ ತಿಳಿಯದೆ ಹೋದರೂ, ದೇವರೇ ಎಲ್ಲಾ ಮಾಡುತ್ತಿದ್ದಾನೆಂದು ಅಂದುಕೊಂಡರೂ ತಪ್ಪಿಲ್ಲ. ಅದರಿಂದ ಪಾಪಪುಣ್ಯಗಳು ಬರುವುದಿಲ್ಲ. ಹಾಗಲ್ಲದೇ ತಾನು ಮಾಡದಿದ್ದರೂ ನಡೆಯುವ ಕೆಲಸಗಳಿಗೆ ತಾನೇ ಕಾರಣವೆಂದುಕೊಂಡು, ಈ ಕಾರ್ಯಗಳನ್ನು ನಾನೇ ಮಾಡಿದ್ದೇನೆಂದು ಜೀವಿಯು ಹೇಳುವುದರಿಂದ ಅವನಿಗೆ ಪಾಪಪುಣ್ಯಗಳೆಂಬ ಕರ್ಮಗಳು ಅಂಟುತ್ತಿವೆ. ವಾಸ್ತವವಾಗಿ ಜೀವಿಗೂ, ನಡೆಯುವ ಕೆಲಸಗಳಿಗೂ ಸಂಬಂಧವೇ ಇಲ್ಲ. ಕೆಲಸಗಳೆಲ್ಲವನ್ನೂ ಆತ್ಮವೇ ಮಾಡುತ್ತಿದೆ. ಆತ್ಮ ಮಾಡುವ ಕೆಲಸಗಳೆಲ್ಲವನ್ನೂ ಶರೀರದ ಮೂಲಕ ನಡೆಯುತ್ತಿರುವುದರಿಂದ ಶರೀರದಲ್ಲಿ ಆತ್ಮ ಅಡಗಿ ಇದ್ದಾನೆಂದು ತಿಳಿಯದೆ, ಆತ್ಮ ವಿಷಯವೇ ಅರ್ಥವಾಗದವನಾಗಿ, ಶರೀರದಲ್ಲಿ ಇರುವವನು ನಾನು ಮಾತ್ರವೇ ಎಂದು, ದೇವರನ್ನು ಕೂಡಾ ಮರೆತುಹೋಗಿರುವವನಾಗಿ, ನಡೆದ ಕೆಲಸಗಳೆಲ್ಲಾ ನಾನೇ ಮಾಡಿದ್ದೇನೆಂದು ಜೀವಿಯು ಅಂದುಕೊಳ್ಳುವುದರಿಂದ ಮಾಡದ ಕರ್ಮ ಫಲಿತ ಎಂದರೇ ಕರ್ಮ (ಪಾಪ ಪುಣ್ಯಗಳು) ಜೀವಿಗೆ ಅಂಟಿಕೊಳ್ಳುತ್ತಿವೆ. ಈ ವಿಧವಾಗಿ ಜೀವಿಯು ಅನವಶ್ಯವಾಗಿ ಅಂದುಕೊಂಡು, ಅನವಶ್ಯವಾಗಿ ಕರ್ಮಗಳನ್ನು ತಲೆಗೆ ಏರಿಸಿಕೊಳ್ಳುತ್ತಿದ್ದಾನೆ. ಇದೆಲ್ಲವನ್ನೂ ಜೀವಿಯ ಅಜ್ಞಾನವೇ ಎಂದು ಹೇಳಬಹುದು.

ಇದಕ್ಕು ಮೊದಲು ಪ್ರಶ್ನೆಯಲ್ಲಿ ನೀನು ಆಧ್ಯಾತ್ಮಿಕ ವಿದ್ಯೆಗೆ ಬ್ರಹ್ಮವಿದ್ಯೆಗೆ ವ್ಯತ್ಯಾಸವನ್ನು ಕೇಳುತ್ತಾ ಎರಡು ಒಂದೇನಾ? ಎಂದಿದ್ದೀಯಾ. ವಿಶ್ವದಲ್ಲಿರುವ ವಿದ್ಯೆಗಳಲ್ಲಿ ಒಂದು ವಿದ್ಯೆಯೇ ಎಲ್ಲದಕ್ಕಿಂತಲೂ ದೊಡ್ಡದು. ಅದೇ ದೇವರನ್ನು ತಿಳಿಯುವ ಬ್ರಹ್ಮವಿದ್ಯೆ ಎಂದು ನಾನು ಹೇಳಿದ್ದರೂ, ಈಗ ದೇವರನ್ನು ತಿಳಿಯುವ ವಿದ್ಯೆಯೇ ಇಲ್ಲವೆಂದು ಹೇಳುತ್ತಿದ್ದೇನೆ. ಒಂದುವೇಳೆ ನಾನು ತಪ್ಪಾಗಿ ದೇವರನ್ನು ತಿಳಿಯುವ ವಿದ್ಯೆ ಇದೆಯೆಂದು ಅಂದುಕೊಂಡರೇ **ದೇವರು ಒಂದು ವಿದ್ಯೆಗೆ ಸಿಗುವವನಾಗಿ ಅಥವಾ ದೇವರು ಒಂದು ವಿದ್ಯೆಗೆ ತಿಳಿಯುವವನಾಗಿ ಹೇಳಿದಂತಾಗುವುದು. ದೇವರು ವಾಸ್ತವವಾಗಿ ಯಾವ ವಿದ್ಯೆಗು ತಿಳಿಯಲ್ಪಡುವವನಲ್ಲ. ದೇವರು ವಿದ್ಯೆಗೆ ಪರಿಮಿತಿಯಾದವನಲ್ಲ**. ಬಹುಶಃ ನಾನು ಈಗ ಹೇಳುವ ಬೋಧನೆ ಈಗ ನನ್ನ ಬಳಿ ಬಿಟ್ಟು ಇನ್ನೆಲ್ಲೂ ಕೇಳಿರುವುದಿಲ್ಲ, ಓದಿರುವುದಿಲ್ಲ. ದೇವರ ಕುರಿತು ಎಲ್ಲರೂ ಹೇಳುವುದು ಒಂದು ವಿಧಾನವಾಗಿದ್ದರೆ ಈಗ 'ದೇವರು ಬ್ರಹ್ಮವಿದ್ಯೆಗು ಸಹ ತಿಳಿಯಲ್ಪಡುವುದಿಲ್ಲ' ಎಂದು ಹೇಳುವುದು ವಿಚಿತ್ರವಾಗಿ ಇರುತ್ತದೆ. ಅಷ್ಟೇತಕ್ಕೆ ಇದಕ್ಕು ಮೊದಲು ದೇವರನ್ನು ಕುರಿತು ನಾನೇ ಹೇಳಿರುವ ಬೋಧನೆಗಳಿಗಿಂತಲೂ ವಿಭಿನ್ನವಾಗಿ ಹೇಳುವುದು ನನಗೆ ತಲೆ ಕೆಟ್ಟಂತೆ ಕಾಣಿಸಿದರೂ ಈಗ ಹೇಳುವುದೇ ವಾಸ್ತವ. ಇದಕ್ಕು ಮೊದಲು ಹೇಳಿರುವುದು ದೇವರನ್ನು ಕುರಿತು, ಈಗ ಹೇಳುವುದು ಆತ್ಮವನ್ನು ಕುರಿತು. ಇದಕ್ಕು ಮೊದಲು ಹೇಳಿರುವುದು ದೇವರ ಗೌರವಾರ್ಥವೇ ಹೊರತು ವಾಸ್ತವವಲ್ಲ. ಜ್ಞಾನಿಗಳಾದರೂ ಸಂಪೂರ್ಣ ಜ್ಞಾನಿಗಳಾಗದವರಿಗೆ ಈಗಲೂ ಸಹ ನಾನು ದೇವರು ಬ್ರಹ್ಮವಿದ್ಯೆಗೆ ತಿಳಿಯಲ್ಪಡುವನೆಂದು ಹೇಳುವೆನು. ಆದರೂ ಸತ್ಯವು ನನ್ನೊಳಗೆ ಎಚ್ಚರಿಕೆಯಿಂದಿದ್ದರೂ, ಸಂದರ್ಭವನ್ನನುಸರಿಸಿ ಅವರಿಗೆ ಹಾಗೆಯೇ ಹೇಳಬೇಕು. ಆದಕಾರಣ ಹಾಗೆ ಹೇಳಬೇಕಾಗಿ ಬಂದಿದೆ. ಸಂಪೂರ್ಣ ಜ್ಞಾನಿಗಳಾದವರಿಗೆ ಎಲ್ಲಾ ಸತ್ಯವನ್ನೇ ಹೇಳಲಾಗುವುದು. ಆದ್ದರಿಂದ ಈಗ ಅಡಗಿರುವ ಆತ್ಮವನ್ನು ಬಯಲಿಗೆಳೆಯುತ್ತಾ ದೇವರು ಪ್ರತ್ಯೇಕವಾದವನು, ಆತ್ಮವೇ ಎಲ್ಲಾ ಮಾಡುತ್ತಿರುವಾಗ, ದೇವರು ಏನೂ ಮಾಡದೆ ಸಾಕ್ಷಿಯಾಗಿ ಇರುತ್ತಾನೆಂದು ಹೇಳುತ್ತಿದ್ದೇನೆ. ಈ ವಿಧವಾಗಿ ಎಲ್ಲರೂ ಹೇಳಲಾರರೆಂದು ಅರ್ಥಮಾಡಿಕೊಳ್ಳಿ.

**ಬ್ರಹ್ಮವಿದ್ಯೆ ಎಂದರೇ ದೊಡ್ಡ ವಿದ್ಯೆ ಎಂದು ಅರ್ಥ.** ಬ್ರಹ್ಮ ಎಂದರೇ ದೊಡ್ಡದು ಎಂದು ಹೇಳಲ್ಪಡುತ್ತಿದೆ. ಪ್ರಪಂಚದಲ್ಲಿ ಯಾರು ದೊಡ್ಡವರು? ಎಂದು ಕೇಳಿದರೇ ತಿಳಿಯದವರಿಗೆ ದೇವರೇ ದೊಡ್ಡವನೆಂದು ಹೇಳುತ್ತೇನೆ. ಒಂದುವೇಳೆ ತಿಳಿದವರಿಗಾದರೇ ದೇವರು ದೊಡ್ಡವನೆಂದು ಹೇಳುವುದಿಲ್ಲ. ಹಾಗೆ ಹೇಳುವುದು ತಪ್ಪಾಗುತ್ತದೆ. ಏಕೆಂದರೇ! ದೇವರನ್ನು ಪರಿಮಿತಿ ಮಾಡಿ ಮಾತನಾಡಿದಂತಾಗುವುದು. ದೇವರು ಒಂದು ಅಳತೆಗೆ ಸಿಕ್ಕವನಾಗಿ ಹೇಳಿದಂತಾಗುವುದು. ನಿಜ ಹೇಳಿದರೇ ದೇವರು ಯಾವ ಅಳತೆಗು ಸಿಗುವವನಲ್ಲ. ಆದ್ದರಿಂದ ಸಂಪೂರ್ಣ ಜ್ಞಾನಿಗಳ ಬಳಿ ಎಲ್ಲದಕ್ಕಿಂತಲೂ ದೊಡ್ಡವನು ದೇವರೆಂದು ಹೇಳದೆ ಆತ್ಮವೆಂದು ಉತ್ತರ ಹೇಳುವೆನು. ದೇವರ ನಂತರ ಇರುವುದು ಆತ್ಮವೇ ಆಗಿರುವುದರಿಂದ ಎಲ್ಲದಕ್ಕಿಂತಲೂ ದೊಡ್ಡದು ಆತ್ಮವೆಂದು ಹೇಳುವುದರಲ್ಲಿ ತಪ್ಪಿಲ್ಲ. ಮೇಲಾಗಿ ಇರುವ ವಾಸ್ತವ ಸಹ ಅದೇ. ದೇವರನ್ನು ಕುರಿತು ಸ್ವಲ್ಪ ತಿಳಿದವನಿಗೆ ದೇವರನ್ನು ಕುರಿತೇ ಹೇಳಬೇಕು. ದೇವರನ್ನು ಕುರಿತು ಹೆಚ್ಚು ತಿಳಿದವನಿಗೆ ದೇವರನ್ನು ಕುರಿತು ಹೇಳದೆ, ದೇವರ ನಂತರವಿರುವ ಆತ್ಮವನ್ನು ಕುರಿತು ಹೇಳಬೇಕು.

'ಆಧ್ಯಾತ್ಮಿಕ' ಎಂದರೇ 'ಆತ್ಮವನ್ನು ಅಧ್ಯಯನ ಮಾಡುವುದು' ಎಂದು ಅರ್ಥ. **ಆತ್ಮವನ್ನು ಅಧ್ಯಯನ ಮಾಡಬಹುದು ಆದರೇ, ದೇವರನ್ನು ಅಧ್ಯಯನ ಮಾಡುವುದಕ್ಕೆ ಸಾಧ್ಯವಿಲ್ಲ. ದೇವರು ಯಾವ ಊಹೆಗು ತಿಳಿಯಲಾರದವನು ಆದ್ದರಿಂದ ಯಾವ ಪರಿಶೋಧಕನಾಗಲೀ, ಯಾವ ಪರಿಶೋಧನೆಯಾಗಲೀ ದೇವರನ್ನು ಕುರಿತು ತಿಳಿಸಲಾರವು.** ಆದರೇ ದೇವರನ್ನು ಕುರಿತು ಯಾರೂ ತಿಳಿಸಲಾರರಾ? ಎಂದು ಕೆಲವರು ಪ್ರಶ್ನಿಸಬಹುದು. ಪ್ರಪಂಚದಲ್ಲಿ ಇಲ್ಲಿಯವರೆಗೂ ಬದುಕಿರುವವನು ಯಾರಾದರಾಗಲೀ ದೇವರನ್ನು ತಿಳಿದವನು, ದೇವರನ್ನು ನೋಡಿದವನು ಯಾರೂ ಇಲ್ಲವೆಂದೇ ಹೇಳಬೇಕು. ಸಂಪೂರ್ಣ ಜ್ಞಾನಿ ಆದರೂ ಸಹ, ಕರ್ಮಗಳನ್ನು ದಹಿಸಿಕೊಳ್ಳುವ ಯೋಗಿ ಆದರೂ ಸಹ, ಸತ್ತು ಹೋದ ನಂತರ, ಮೋಕ್ಷ ಪಡೆದ ನಂತರ, ಕರ್ಮಗಳಿಂದ ಮುಕ್ತಿ ಪಡೆದ

ನಂತರ, ದೇವರಲ್ಲಿ ಐಕ್ಯವಾದ ನಂತರ ದೇವರನ್ನು ತಿಳಿಯಲಾಗುವುದು. ಶರೀರದೊಂದಿಗೆ ಬದುಕಿದ್ದಾಗ ಯಾರಾದರೂ, ಕರ್ಮಗಳ ಶೇಷವಿದ್ದು ಪೂರ್ತಿ ಸಾವು ಬಾರದ ಮುಂಚೆಯಾಗಲೀ ಯಾರೂ ದೇವರನ್ನು ತಿಳಿಯುವುದಕ್ಕೆ ಸಾಧ್ಯವಿಲ್ಲ.

ಆಧ್ಯಾತ್ಮಿಕ ಎಂದರೇ ಆತ್ಮವನ್ನು ಅಧ್ಯಯನ ಮಾಡುವುದೆಂದು ಅರ್ಥ. ಇನ್ನೂ ಹೇಳಿದರೇ ಆತ್ಮವನ್ನು ಕುರಿತು ತಿಳಿದುಕೊಳ್ಳುವುದೆಂದು ಹೇಳುವುದು. ಆತ್ಮವನ್ನು ಕುರಿತು ತಿಳಿಸುವ ಕೇಂದ್ರವನ್ನು 'ವಿಶ್ವ ವಿದ್ಯಾಲಯ' ಎಂದು ಹೇಳುತ್ತೇವೆ. ಹೊರಗೆ ಶಾಸ್ತ್ರಬೋಧನೆಗಳನ್ನು ಹೇಳುವ ಬೋಧನಾಲಯಗಳನ್ನು ವಿಶ್ವ ವಿದ್ಯಾಲಯಗಳು ಎನ್ನುತ್ತಿದ್ದರೆ ಕೇಳಿದ್ದೇವೆ. ಅವುಗಳಿಗೆ ಆ ಹೆಸರು ಸರಿಹೋಗುವು ದಿಲ್ಲ. ಎಲ್ಲಾದರೇ ಆತ್ಮವಿದ್ಯೆ ಬೋಧಿಸಲ್ಪಡುತ್ತಿದೆಯೋ ಅಲ್ಲಿರುವು ದನ್ನು ವಿಶ್ವ ವಿದ್ಯಾಲಯ ಎನ್ನಬಹುದು. ವಿಶ್ವವಿದ್ಯಾಲಯಗಳು ಎರಡು ವಿಧಗಳಾಗಿ ಇರುವಂತೆ ತಿಳಿಯುತ್ತಿದೆ. ಒಂದು ಸ್ಥೂಲ, ಮತ್ತೊಂದು ಸೂಕ್ಷ್ಮ ಎಂದು ಹೇಳಬಹುದು. ದೇವರು ತನ್ನ ಜ್ಞಾನವನ್ನು ತಿಳಿಸುವ ನಿಮಿತ್ತ ಅಧರ್ಮಗಳ ನಿರ್ಮೂಲನೆ ಮಾಡುವುದಕ್ಕೆ ಭೂಮಿಮೇಲೆ ಬರಬೇಕೆಂದುಕೊಂಡಾಗ ಶರೀರ ಧರಿಸಿ ಭಗವಂತನಾಗಿ ಬಂದು ಜ್ಞಾನವನ್ನು ಹೇಳಿ ಹೋಗುವನು. ಭಗವಂತನು ಬಂದಿರುವುದು ಯಾರಿಗೂ ತಿಳಿಯದಿದ್ದರೂ ಆತನು ಹೇಳುವ ಜ್ಞಾನವೆಲ್ಲವೂ ವಿಶ್ವ ವಿದ್ಯೆಗೆ ಸಂಬಂಧಿಸಿರುವುದೇ. ಆದ್ದರಿಂದ ಭಗವಂತನು ಸ್ಥೂಲವಾಗಿ ಎಲ್ಲಿದ್ದು ಬೋಧಿಸಿದರೂ ಆತನಿರುವ ಸ್ಥಳವೇ ವಿಶ್ವವಿದ್ಯಾಲಯವಾಗುತ್ತದೆ. ಭಗವಂತನು ಭವನದಲ್ಲಿದ್ದರೂ, ಚಿಕ್ಕಗುಡಿಸಲಲ್ಲಿದ್ದರೂ ಆಗ ಅದೇ ವಿಶ್ವ ವಿದ್ಯಾಲಯವಾಗಿ ಹೇಳಲಾಗುತ್ತದೆ.

ಕಾಣಿಸದ ದೇವರು ಪ್ರಜೆಗಳಿಗೆ ಜ್ಞಾನ ಹೇಳುವುದಕ್ಕೆ ಕಾಣಿಸುವ ಭಗವಂತನಾಗಿ ಶರೀರವನ್ನು ಧರಿಸಿ ಬರಬೇಕಾಗಿದೆ. ಹಾಗೆ ಬಂದಿರುವಾಗ ಆತನನ್ನು ಯಾರೂ ಗುರುತು ಹಿಡಿಯದಿದ್ದರೂ ಆತನು ಮಾತ್ರ ತನ್ನ ಜ್ಞಾನವನ್ನೇ ಬೋಧಿಸುವನು. ದೇವರ ಧರ್ಮವನ್ನು ಅನುಸರಿಸಿ ದೇವರು ಸೂಕ್ಷ್ಮವಾಗಿ

ಇದ್ದಾಗ ಪ್ರಜೆಗಳಿಗೆ ಜ್ಞಾನವನ್ನು ಹೇಳಲಾರನು. ದೇವರಾಗಿ ಮನುಷ್ಯರೊಂದಿಗೆ ಎಂತಹ ಸಂಬಂಧವಿರುವುದಿಲ್ಲ. ದೇವರು ಪ್ರತ್ಯಕ್ಷವಾಗಿ ಸಂಬಂಧವಿಲ್ಲದಿರುವು ದರಿಂದ, ದೇವರ ಜ್ಞಾನವನ್ನು ಪ್ರಜೆಗಳಿಗೆ ತಿಳಿಸುವ ನಿಮಿತ್ತ, ಆತನು ದೇವರಲ್ಲದ ಭಗವಂತನ ವೇಷವನ್ನು ಧರಿಸಬೇಕಾಗಿ ಬಂದಿದೆ. ದೇವರ ಜ್ಞಾನವು ದೇವರಿಗೆ ಹೊರತು ಇತರರಿಗೆ ಯಾರಿಗೂ ತಿಳಿಯದೆ ಇರುವುದರಿಂದ, ತನ್ನ ಜ್ಞಾನವನ್ನು ತಾನೇ ಯಾವುದೋ ಒಂದು ವಿಧವಾಗಿ ಹೇಳಬೇಕಾಗಿರುತ್ತದೆ. ಆದ್ದರಿಂದ ದೇವರು ತನ್ನ ಯೋಚನೆಯಿಂದ ತಾನೇ ಭಗವಂತನಾಗಿ ಬದಲಾಗಿ ಪ್ರಜೆಗ ಳೊಂದಿಗೆ ಪ್ರತ್ಯಕ್ಷವಾಗಿ ಸಂಬಂಧವನ್ನು ಇಟ್ಟುಕೊಂಡು ತನ್ನ ಜ್ಞಾನವೆಲ್ಲ ವನ್ನೂ ಹೇಳುತ್ತಾನೆ. ಸೃಷ್ಠಿ ಮೊದಲಿನಿಂದಲೂ ದೇವರು ಭಗವಂತನಾಗಿ ಎಷ್ಟುಬಾರಿ ಬಂದಿದ್ದಾನೋ ಹೇಳಲಾರೆವು ಆದರೇ, ಈಗ ನಮಗೆ ತಿಳಿದು ದ್ವಾಪರಯುಗ ಕೊನೆಯಲ್ಲಿ ಒಂದುಬಾರಿ, ಕಲಿಯುಗದಲ್ಲಿ ಒಂದುಬಾರಿ ಬಂದುಹೋದಹಾಗೆ ತಿಳಿದಿದೆ. ಇದೇ ಕಲಿಯುಗದಲ್ಲಿಯೇ ದೇವರು ಭಗವಂತನಾಗಿ ಮೂರನೆಯಬಾರಿ ಬರಬೇಕಾಗಿದೆ. ದೇವರು ಸೂಕ್ಷ್ಮವಾದವನು ಆಗಿರುವಾಗ, ಭಗವಂತನು ಸ್ಥೂಲವಾದವನು. ಆತನು ಬಂದಾಗ ಹೇಳುವ ಬೋಧನೆ ದೇವರ ಜ್ಞಾನವೇ ಎಂದು ಹೇಳಿದರೂ, ಅದು ನೇರವಾಗಿ ಪರಮಾತ್ಮ ಜ್ಞಾನವಾಗಿ ಇರುವುದಿಲ್ಲ, ಆತ್ಮಜ್ಞಾನದವರೆಗೇ ಇರುತ್ತದೆ.

"ದೇವರ ಜ್ಞಾನವು ದೇವರಿಗೆ ಬಿಟ್ಟು ಇತರರಿಗೆ ತಿಳಿದಿಲ್ಲ" ಎಂದು ಹೇಳುವುದಕ್ಕೆ ಆಧಾರವಾಗಿ ಅಂತಿಮ ದೈವಗ್ರಂಥದಲ್ಲಿ ಸೂರಾ 3ರಲ್ಲಿ ಆಯತ್ 7ರಲ್ಲಿ ಇದೆ. ಅಷ್ಟೇ ಅಲ್ಲದೆ "ದೇವರು ತನ್ನ ಪ್ರತಿನಿಧಿಯಾಗಿ ತನ್ನ ಆತ್ಮನನ್ನೇ ಕಳುಹಿಸುವನೆಂದು" ಖುರಾನ್ ಗ್ರಂಥದಲ್ಲಿ ಸೂರಾ 15ರಲ್ಲಿ ಆಯತ್ 29ರಲ್ಲಿ ಇದೆ. "ದೇವರು ಭಗವಂತನಾಗಿ ಶರೀರ ಧರಿಸಿ ಬರುತ್ತೇನೆಂದು" ಭಗವದ್ಗೀತೆ ಯಲ್ಲಿ ಜ್ಞಾನಯೋಗದಲ್ಲಿ ಹೇಳಲ್ಪಟ್ಟಿದೆ. ದೇವರು ಭಗವಂತನಾಗಿ ಬದಲಾಗಿ ಹೋಗಿ ಸ್ಥೂಲ ಮನುಷ್ಯರೊಂದಿಗೆ ಸ್ಥೂಲ ಭಗವಂತನಾಗಿ ಬೋಧನೆ ಹೇಳುವನು. ಆಗ ಹೇಳುವ ಬೋಧನೆ ದೇವರಲ್ಲಿ ಮಧ್ಯದಲ್ಲಿರುವವನಾದ

ಆತ್ಮವನ್ನು ಕುರಿತಾಗಿಯೇ ಹೇಳುವನು. ಮಧ್ಯಾತ್ಮ ಎಲ್ಲರಲ್ಲಿ ಇರುವುದರಿಂದ ಆತ್ಮನನ್ನು **ಸರ್ವಧಾರಿ** ಎಂದು ಅನ್ನುತ್ತಿದ್ದೇವೆ. ವಿಶ್ವದಲ್ಲಿರುವ ಜನರಲ್ಲಿ ಎಲ್ಲರಲ್ಲೂ ಇರುವುದರಿಂದ ಆತನನ್ನು (ಮಧ್ಯಾತ್ಮನನ್ನು) ವಿಶ್ವರೂಪದವನೆಂದು ಸಹ ಎಂದಿದ್ದಾರೆ. ಮಹಾಭೂತಗಳಾದ ಆಕಾಶ, ಗಾಳಿ, ಅಗ್ನಿ, ನೀರು, ಭೂಮಿಯಲ್ಲಿ ಆತ್ಮ ಇರುವುದರಿಂದ ವಿಶ್ವವೆಲ್ಲಾ ಆತ್ಮವಿದ್ದು ವಿಶ್ವರೂಪದವನಾಗಿದ್ದಾನೆ. ಆತ್ಮವನ್ನು ಕುರಿತು ಭಗವದ್ಗೀತೆಯಲ್ಲಿ ಭಗವಂತನು ಹೇಳಿದರೂ, ಬೈಬಲಿನಲ್ಲಿ ಹೇಳಿದರೂ ಅದೆಲ್ಲವೂ ದೇವರನ್ನು ಕುರಿತು ಹೇಳಿರುವುದಾಗಿಯೇ ಲೆಕ್ಕಿಸಿದ್ದಾರೆ. ಆದರೇ ಅಲ್ಲಿ ಹೇಳಿರುವುದು ಆತ್ಮವನ್ನು ಕುರಿತೆಂದು ಯಾರೂ ಇಲ್ಲಿಯವರೆಗು ತಿಳಿಯಲಾರದೆ ಹೋಗಿದ್ದಾರೆ.

ಈ ದಿನ ಆಶ್ರಮಗಳು, ಆಧ್ಯಾತ್ಮಿಕ ಪೀಠಗಳನ್ನು ನೆಲೆಗೊಳಿಸಿರುವ ಸ್ವಾಮೀಜಿಗಳು, ನಾವು ಬಾಬಾಗಳೆಂದು ಹೇಳಿಕೊಳ್ಳುವವರು ಎಷ್ಟೋ ಜನರಿದ್ದಾರೆ. ಈದಿನ ಆಧ್ಯಾತ್ಮಿಕ ಉಪನ್ಯಾಸಗಳು ಅನೇಕ ಕಡೆಗಳಲ್ಲಿ ನಡೆಯುತ್ತಿವೆ. ಆದರೂ ಆತ್ಮನನ್ನು ಕುರಿತು ಯಾರೂ ಹೇಳಿಕೊಳ್ಳುತ್ತಿಲ್ಲ. ಯಾರು ಹೇಳಿದರೂ ದೇವರನ್ನು ಕುರಿತು ಹೇಳುತ್ತಿದ್ದಾರೆ ಹೊರತು ದೇವರಿಗೆ, ಜೀವಿಗೆ ಮಧ್ಯದಲ್ಲಿರುವ ಮಧ್ಯಾತ್ಮನನ್ನು ಕುರಿತು ಯಾರೂ ಹೇಳುತ್ತಿಲ್ಲ. ಅವರು ಹೇಳುವ ಬೋಧನೆಗಳಲ್ಲಿ ಆತ್ಮವೆಂಬ ಹೆಸರು ಬಹಳ ಸಲ ಕೇಳಿಸುತ್ತಿದ್ದರೂ, ಆತ್ಮವೆಂದರೇ ಏನೆಂದು? ಯಾರೂ ಆಲೋಚಿಸುತ್ತಿಲ್ಲ. ಈದಿನ ಭೂಮಿಮೇಲಿರುವ ಜ್ಞಾನಿಗಳೆಲ್ಲರೂ ಜೀವಾತ್ಮ, ಪರಮಾತ್ಮಗಳ ವಿಷಯವೇ ಹೇಳುತ್ತಿರುತ್ತಾರೆ ಹೊರತು, ಜೀವಿಗು, ದೇವರಿಗು ಮಧ್ಯದಲ್ಲಿರುವ ಆತ್ಮವನ್ನು ಕುರಿತು ಯಾರೂ ಹೇಳುತ್ತಿಲ್ಲ. ಆದ್ದರಿಂದ ಇತ್ತ ಪ್ರಜೆಗಳಿಗಾಗಲೀ, ಅತ್ತ ಸ್ವಾಮಿಗಳಿಗಾಗಲೀ ಆತ್ಮವನ್ನು ಕುರಿತು ತಿಳಿಯದೇ ಹೋಗಿದೆ.

**ಪ್ರಶ್ನೆ :– ಆತ್ಮವನ್ನು ಕುರಿತು ಯಾರಿಗೂ ತಿಳಿಯದೇ ಹೋಗಿದೆಯೆಂದು ನೀವು ಹೇಳುತ್ತಿದ್ದೀರ. ಹಾಗಿರುವಾಗ ಆತ್ಮವನ್ನು ಕುರಿತು ಪ್ರತ್ಯೇಕವಾಗಿ ನಿಮಗೆ ಹೇಗೆ ತಿಳಿದಿದೆ. ಎಂದು ನಮಗೆ ಪ್ರಶ್ನೆಯಿದೆ ಇದಕ್ಕೆ ಉತ್ತರ ಹೇಳಿರಿ.**

**ಉತ್ತರ :–** ಭೂಮಿಮೇಲೆ ಹುಟ್ಟಿರುವ ಸ್ವಾಮೀಜಿಗಳೆಲ್ಲರಿಗೂ ಮಧ್ಯದಲ್ಲಿರುವ ಆತ್ಮ ತಿಳಿಯದೇ ಹೋಗಿದೆಯೆಂಬ ಉದ್ದೇಶದಿಂದ ಆತ್ಮವನ್ನು ಕುರಿತು ತಿಳಿಸಿರೆಂದು ದೇವರೇ ನನ್ನನ್ನು ಕಳುಹಿಸಿದಂತೆ ನನಗರ್ಥವಾಗಿದೆ. ಅಷ್ಟೇ ಅಲ್ಲದೆ ನಾನು ಹುಟ್ಟುವುದಕ್ಕಿಂತ ಮೊದಲು ಸುಮಾರು 350 ಅಥವಾ 400 ವರ್ಷಗಳ ಕೆಳಗೆ ಹುಟ್ಟಿದ ಬ್ರಹ್ಮಯ್ಯನವರು ತನ್ನ ಕಾಲಜ್ಞಾನದಲ್ಲಿ ನನ್ನನ್ನು ಕುರಿತು ಅನೇಕ ವಾಕ್ಯಗಳು ಬರೆಯುತ್ತಾ, ಅದರಲ್ಲಿ ಒಂದು ವಾಕ್ಯದಲ್ಲಿ **"ನಾನು ಹೇಳುವ ಬೋಧನೆಗಳಲ್ಲಿ ಮಧ್ಯಾತ್ಮ ಪ್ರಕಾಶಿತವಾಗುವನು"** ಎಂದು ಹೇಳಿದ್ದಾನೆ. ಏಷ್ಯ ಕಾಲಜ್ಞಾನದಲ್ಲಿ ಈ ಮಾತು ಇದೆ. ದೇಶದಲ್ಲಿ ಹುಟ್ಟಿರುವ ಸ್ವಾಮೀಜಿಗಳೆಲ್ಲರ ದೃಷ್ಠಿ ಜೀವಿ, ದೇವರ ಮೇಲಯೇ ಹೋಗಿದೆ. ಜೀವಿಯು ದೇವರನ್ನು ತಿಳಿಯುವುದೇ ಆಧ್ಯಾತ್ಮಿಕ ಎಂದು ಹೇಳಿದ್ದಾರೆ. ಅದೇ ಬ್ರಹ್ಮವಿದ್ಯೆ ಎಂದು ಸಹ ಹೇಳಿದ್ದಾರೆ. ಆದರೇ ನನಗೆ ಯುಕ್ತವಯಸ್ಸಿನಿಂದಲೇ ಜೀವಾತ್ಮ ಪರಮಾತ್ಮರ ಮೇಲೆ ದೃಷ್ಠಿ ಉಂಟಾಗುವುದೇ ಅಲ್ಲದೇ, ಪ್ರತ್ಯೇಕಿಸಿ ಮಧ್ಯ ಆತ್ಮದ ಮೇಲೆ ದೃಷ್ಠಿ ಹರಿದಿದೆ. ಆದ್ದರಿಂದ ಅದ್ವೈತವನ್ನು ಆದಿಶಂಕರಾಚಾರ್ಯರು, ವಿಶಿಷ್ಟಾದ್ವೈತ ವನ್ನು ರಾಮಾನುಜಚಾರ್ಯರವರು ಪ್ರತಿಪಾದಿಸಿದಂತೆ ನಾನು **ತ್ರೈತಸಿದ್ಧಾಂತವನ್ನು** ಪ್ರತಿಪಾದಿಸುವುದು ನಡೆದಿದೆ. **ದೇವರು ಮೂರು ಆತ್ಮಗಳಾಗಿ ಇದ್ದಾನೆಂದು ತಿಳಿಸುವ ಸಿದ್ಧಾಂತವನ್ನೇ ತ್ರೈತ ಸಿದ್ಧಾಂತವೆಂದು ಹೇಳುತ್ತಾರೆ.** ನಾನು ತ್ರೈತಸಿದ್ಧಾಂತವನ್ನು ಪ್ರತಿಪಾದಿಸಿ ಅದರಲ್ಲಿ ಮಧ್ಯಾತ್ಮನನ್ನು ಕುರಿತು ಹೆಚ್ಚಾಗಿ ಹೇಳಿರುವುದಾಗಿದೆ. ನಾನು ಮಧ್ಯಾತ್ಮನನ್ನು ಕುರಿತು ಪ್ರಚಾರ ಮಾಡುವೆನೆಂದು ಶ್ರೀ ಪೋತುಲೂರಿ ವೀರಬ್ರಹ್ಮಯ್ಯನವರು ತನ್ನ 'ಕಾಲ ಜ್ಞಾನದಲ್ಲಿ' ಮೊದಲೇ ಬರೆದಿಟ್ಟಿದ್ದಾರೆ. ವೀರಬ್ರಹ್ಮಯ್ಯನವರಿಗೆ ನಾಲಕ್ಕು ನೂರು ವರ್ಷಗಳ ಕೆಳಗೇ ನಾನು ಮಧ್ಯಾತ್ಮವನ್ನು ಕುರಿತು ಹೇಳುತ್ತೇನೆಂದು ಹೇಗೆ ತಿಳಿದಿದೆಯೋ ಆದರೆ ಆತನು ಹೇಳಿರುವುದು ಸತ್ಯವಾಗಿದೆ. **ನಿನಗೆ ಹೇಗೆ ತಿಳಿಯಿತು? ಎನ್ನುವುದು ನಿಮ್ಮ ಪ್ರಶ್ನೆಯಾದರೇ ನನ್ನಲ್ಲಿನ ಆತ್ಮವೇ ಈ ವಿಧವಾಗಿ ಹೇಳಿಸಿದೆಯೆಂದು ನನ್ನ ಉತ್ತರ.**

ಈಗ ಅಸಲು ವಿಷಯಕ್ಕೆ ಬಂದು ವಿಶ್ವವಿದ್ಯಾಲಯವನ್ನು ಕುರಿತು ಹೇಳಿದರೇ ವಿಶ್ವವಿದ್ಯಾಲಯಗಳು ಸ್ಥೂಲವಾಗಿವೆ, ಸೂಕ್ಷ್ಮವಾಗಿವೆ ಎಂದು ಹೇಳಿದ್ದೇವೆ. ದೇವರು ಭಗವಂತನಾಗಿ, ಕಾಣಿಸುವ ಮನುಷ್ಯನಾಗಿ ಬಂದರೇ ಆತನು ಎಲ್ಲಿದ್ದು ಬೋಧಿಸಿದರೇ ಅದೇ ವಿಶ್ವವಿದ್ಯಾಲಯವಾಗಿ ಹೇಳಲಾಗುವುದು. ಭಗವಂತನು ಬೋಧಿಸುವುದು ವಿಶ್ವವೆಲ್ಲಾ ಆತ್ಮವಾಗಿ ವ್ಯಾಪಿಸಿರುವುದನ್ನು ಕುರಿತು ಹೇಳುವುದರಿಂದ ಆ ಬೋಧನೆ ಬೋಧಿಸುವ ಜಾಗವನ್ನೇ ವಿಶ್ವವಿದ್ಯಾಲಯವೆಂದು ಹೇಳಬಹುದು. ಅದೆಲ್ಲವೂ ದೇವರು ಭಗವಂತನಾಗಿ ಬಂದರೇ ಆಗ ಸ್ಥೂಲವಾಗಿ ವಿಶ್ವವಿದ್ಯಾಲಯವಿದೆಯೆಂದು ಹೇಳಬಹುದು. **ದೇವರು ಭಗವಂತನಾಗಿ ಬಂದ ಸಮಯ ಯಾವುದೋ ಯಾರಿಗೂ ತಿಳಿಯದೆ ಇರುವುದರಿಂದ ಭಗವಂತನು ಗುರುತಿಸಲ್ಪಡುವುದಿಲ್ಲ, ಹಾಗೆಯೇ ವಿಶ್ವ ವಿದ್ಯಾಲಯವು ಗುರುತಿಸಲಡ್ಪುವುದಿಲ್ಲ.** ವಿಶ್ವವಿದ್ಯಾಲಯವು ಸ್ಥೂಲವಾಗಿದ್ದರೂ ಅದು ಯಾರಿಂದಲೂ ಗುರುತಿಸಲ್ಪಡದೆ ಇರುತ್ತದೆ. ಹೊರಗಿನ ಪ್ರಪಂಚದಲ್ಲಿ ಗಣಿತ, ಖಗೋಳ, ರಸಾಯನಿಕ, ಭೌತ ಶಾಸ್ತ್ರಗಳನ್ನು ಬೋಧಿಸುವ ವಿಶ್ವ ವಿದ್ಯಾಲಯಗಳೆನ್ನುವವು ದೊಡ್ಡದೊಡ್ಡ ಭವನ ಸಮುದಾಯವನ್ನು ಹೊಂದಿವೆ. ಈಗ ನಾವು ಪ್ರಪಂಚ ಸಂಬಂಧ ವಿಶ್ವ ವಿದ್ಯಾಲಯಗಳನ್ನು ಕುರಿತು ನಾವು ಕೇಳುತ್ತಿಲ್ಲ. ಕೇವಲ ಆಧ್ಯಾತ್ಮಿಕ ವಿದ್ಯೆಗೆ ಸಂಬಂಧಿಸಿದ ಬ್ರಹ್ಮವಿದ್ಯಾ ಶಾಸ್ತ್ರಕ್ಕೆ ಸಂಬಂಧಿಸಿದ ವಿಶ್ವವಿದ್ಯಾಲಯವು ಇಂತಹಕಡೆ ಇದೆಯೆಂದು ಯಾರೂ ಹೇಳಲಾರರು. ಹಾಗೆಯೇ ಬ್ರಹ್ಮ ವಿದ್ಯೆಗೆ ಸಂಬಂಧಿಸಿದ ವಿಶ್ವವಿದ್ಯಾಲಯವು ಯಾರಿಗೂ ತಿಳಿದಿಲ್ಲ. ಹಾಗೆಯೇ ಅದರಲ್ಲಿ ಯಾರು ಬೋಧಿಸುವುದು ತಿಳಿದಿಲ್ಲ. ಹೀಗೆ ಸ್ಥೂಲವಾಗಿರುವ ವಿಶ್ವ ವಿದ್ಯಾಲಯವನ್ನು ಕುರಿತು ಈಗಲೇ ಅಲ್ಲ ಭವಿಷ್ಯತ್ತಿನಲ್ಲಿ ಎಂದೂ ಯಾರೂ ಹೇಳಲಾರರು.

ಸೂಕ್ಷ್ಮವಾದ ಎಂದರೇ ಕಾಣಿಸದ ವಿಶ್ವವಿದ್ಯಾಲಯದಲ್ಲಿ ಯಾರು ಬೋಧಿಸುವುದು, ಬೋಧಿಸುವ ಬೋಧಕನು ಏನು ಬೋಧಿಸುತ್ತಿದ್ದಾನೆಂದು ಪ್ರಶ್ನಿಸಿದರೇ ಕಾಣಿಸದಿರುವುದನ್ನು ಕುರಿತು ಏನೂ ಹೇಳಲಾರೆವು ಎಂದು ಅನ್ನುತ್ತಿದ್ದಾರೆ. ಈಗ ನಾವು ಕಾಣಿಸದ ವಿಶ್ವ ವಿದ್ಯಾಲಯವನ್ನು ಕುರಿತು

ತಿಳಿದುಕೊಂಡರೆ, ಕಾಣಿಸದ ವಿಶ್ವವಿದ್ಯಾಲಯದಲ್ಲಿ ಬೋಧಿಸುವವನು ಆತ್ಮವೇ ಎಂದು ತಿಳಿಯುತ್ತಿದೆ. ಆತ್ಮ ಬೋಧಿಸುವುದನ್ನು **"ಆತ್ಮ ಪ್ರಬೋಧ"** ಎನ್ನುತ್ತಿದ್ದೇವೆ. ಆತ್ಮ ಜೀವವಿರುವ ಶರೀರದಲ್ಲಿ ಅಡಗಿ ಯಾರಿಗೂ ತಿಳಿಯದೇ ಇದ್ದೂ, ಯಾರಿಗೂ ತಿಳಿಯದೇ ಜ್ಞಾನವನ್ನು ಬೋಧಿಸುತ್ತಿದೆ. ಆತ್ಮ ಶರೀರದಲ್ಲಿದೆಯೆಂದು ಜ್ಞಾನಿಗಳಾಗಿರುವವರಿಗೇ ತಿಳಿದಿಲ್ಲ. ಸಾಧಾರಣ ಮನುಷ್ಯರಿಗೆ ಆತ್ಮ ವಿಷಯವೇ ಅಲ್ಲ, ದೇವರು ಸಹ ತಮ್ಮಲ್ಲಿರುವನೆಂದು ತಿಳಿದಿಲ್ಲ. ಶರೀರದಲ್ಲಿ ತಾನು (ಜೀವಿಯು) ಒಬ್ಬನೇ ಇರುವಂತೆ ತಿಳಿಯುತ್ತಿದ್ದಾನೆ. ಜ್ಞಾನಿಗಳೆಂದು ಎನಿಸಿಕೊಂಡವರು, ಬೋಧಿಸುವ ಸಾಮರ್ಥ್ಯವಿರುವ ಸ್ವಾಮೀಜಿಗಳಿಗೆ ಸಹಿತ ಜೀವಾತ್ಮ, ಪರಮಾತ್ಮದೊಂದಿಗೆ ಸಹ ಶರೀರದಲ್ಲಿ ಆತ್ಮ ಸಹ ಇದೆಯೆಂಬ ವಿಷಯವು ತಿಳಿದಿಲ್ಲ. ತಿಳಿಯದೆ ಹೋಗಿರುವುದರಿಂದ ಎಲ್ಲ ಕೆಲಸಗಳನ್ನು ಜೀವಿಯೇ ಮಾಡುತ್ತಿದ್ದಾನೆಂದು ತಿಳಿಯುತ್ತಿದ್ದಾರೆ. ಆದ್ದರಿಂದ ಸ್ವಾಮೀಜಿಗಳು ಸಹಿತ ಪಾಪದಲ್ಲಿ ಮುಳುಗಿಹೋಗುತ್ತಿದ್ದಾರೆ. ಜೀವಿಯು ಕೆಲಸಗಳು ಮಾಡದಿದ್ದರೂ ಕೆಲಸಗಳು ಮಾಡಿದ್ದೇನೆಂದು, ಮಾಡುತ್ತಿದ್ದೇನೆಂದು ತಿಳಿಯುತ್ತಿರುವುದರಿಂದ ಆತನಿಗೆ ಕರ್ಮ ಬಂಧನಗಳು ಏರ್ಪಡುತ್ತಿವೆ. ಲೋಕದಲ್ಲಿನ ಪ್ರಜೆಗಳೆಲ್ಲರಿಗೂ ಆತ್ಮ ಶರೀರದಲ್ಲಿದ್ದು, ಆತ್ಮವೇ, ಕೆಲಸ ಮಾಡುತ್ತಿದೆ ಎಂದು ಸ್ವಲ್ಪವಾದರೂ ತಿಳಿಯುತ್ತಿಲ್ಲ. ಆತ್ಮ ವಿಷಯವನ್ನು ತಿಳಿಯದ ಯಾರನ್ನಾದರೂ ಅಜ್ಞಾನಿಗಳೆಂದು ಹೇಳಬೇಕಾಗಿರುವುದೇ!

ಆತ್ಮವೊಂದರ ಜ್ಞಾನವನ್ನು ತಿಳಿದವರಿಗಿಂತಲೂ ತಿಳಿಯದವರೇ ಅಧಿಕ ಸಂಖ್ಯೆಯಲ್ಲಿದ್ದಾರೆ. ಸಾಮಾನ್ಯ ಮನುಷ್ಯರ ವಿಷಯವಲ್ಲದೇ ಜ್ಞಾನವನ್ನು ಬೋಧಿಸುವ ಸ್ವಾಮೀಜಿಗಳಾದವರಿಗೇ ಆತ್ಮ ವಿಷಯ ತಿಳಿಯದೇ ಹೋಗಿದೆ. ಆತ್ಮ ವಿಷಯ ತಿಳಿಯದಿರುವುದರಿಂದ ಅವರು ನೇರವಾಗಿ ದೇವರನ್ನು ಕುರಿತಾದ ಬೋಧನೆಗಳನ್ನು ಹೇಳುತ್ತಿದ್ದಾರೆ. ದೇವರನ್ನು ಕುರಿತಾದ ಬೋಧನೆಗಳು ಎಷ್ಟು ಹೇಳಿದರೂ, ಅವು ಕೇಳುವುದಕ್ಕೆ ಚೆನ್ನಾಗಿರುತ್ತದೆ ಆದರೇ, ಅದು ಪ್ರತ್ಯಕ್ಷ ಪ್ರಮಾಣವಾದ ಜ್ಞಾನವಾಗಿ ಇರುವುದಿಲ್ಲ. ದೇವರನ್ನು ಕುರಿತು ಹೇಳುವ

ಬೋಧನೆಗಳೆಲ್ಲ ಉತ್ತರವಿಲ್ಲದ ಪ್ರಶ್ನೆಯಾಗಿ ಉಳಿದುಹೋಗುತ್ತಿವೆ. 'ರೂಪ, ನಾಮ, ಕ್ರಿಯೆಗಳು ಇಲ್ಲದವನು ದೇವರು' ಎಂದಾಗ ಆತನನ್ನು ಕುರಿತು ಹೇಳುವ ಬೋಧನೆಗಳೆಲ್ಲ ರೂಪ, ನಾಮ, ಕ್ರಿಯೆಗಳೊಂದಿಗೆ ಬೆರೆತಿರುತ್ತದೆ. ಆದ್ದರಿಂದ ಹೇಳಲ್ಪಟ್ಟಿರುವ ದೇವರ ಜ್ಞಾನ ಪ್ರಶ್ನಿಸಿದರೇ ಉತ್ತರವಾಗಿ ನಿಲ್ಲದೇ ಹೋಗುತ್ತಿದೆ. ಆದ್ದರಿಂದ ಮನುಷ್ಯ ಆತ್ಮಜ್ಞಾನವನ್ನು ತಿಳಿಯದೇ ನೇರವಾಗಿ ದೇವರ ಜ್ಞಾನವನ್ನು ತಿಳಿಯುವುದರಿಂದ ಏನೂ ಪ್ರಯೋಜನವಿಲ್ಲ. ಅಂತಹ ಜ್ಞಾನವು ಸಂಶಯಗಳಮಯವಾಗಿ ಕೊನೆಗೆ ಇಲ್ಲದೇ ಹೋಗುವುದು. ಜ್ಞಾನವೆಂದರೇ ಪ್ರತಿಯೊಂದಕ್ಕು ಉತ್ತರವಾಗಿ ಇರುವುದು. ಎಂದಾದರೇ ಉತ್ತರವಿಲ್ಲವೋ ಆಗ ಆತನಲ್ಲಿ ಅಜ್ಞಾನವಿದ್ದಹಾಗೆಯೇ ಆಗುತ್ತದೆ. ಹಾಗಲ್ಲದೇ "ನನಗೆ ದೈವಜ್ಞಾನ ಅವಶ್ಯ, ನಾನು ಯಾವುದು ಮೊದಲು, ಯಾವುದು ಹಿಂದೆ ತಿಳಿಯಬೇಕೋ ನನಗೆ ತಿಳಿದಿಲ್ಲ, ಆದ್ದರಿಂದ ನೀನೇ ನನಗೆ ಜ್ಞಾನವನ್ನು ಬೋಧಿಸಬೇಕೆಂದು" ಕೋರಿಕೊಂಡಂತಾದರೇ ಶರೀರದಲ್ಲಿನ ಆತ್ಮ, ಪರಮಾತ್ಮಗ ಳಲ್ಲಿ ಪರಮಾತ್ಮ ಮಾತನಾಡದೆ ನೋಡುತ್ತಾ ಇರುವಾಗ, ಆತ್ಮವೇ ಎಲ್ಲ ಕೆಲಸಗಳು ಮಾಡುವ ಕರ್ತನಾಗಿ ಇರುವುದರಿಂದ ಜ್ಞಾನವನ್ನು ಹೇಳುವ ಕಾರ್ಯವನ್ನು ಕೂಡಾ ಆತ್ಮವೇ ಮಾಡುತ್ತದೆ.

**ಪ್ರಶ್ನೆ :– ಕೇಳಿದಷ್ಟು ಮಾತ್ರಕ್ಕೇ ಒಳಗೆ ನಡೆದು ಹೋಗುವುದಕ್ಕೆ, ಆತ್ಮ ಬೋಧಿಸುವುದಕ್ಕೆ ಆತ್ಮ ಏನಾದರೂ ಮನುಷ್ಯನಿಗೆ ಗುಮಾಸ್ತಾ ಕೆಲಸವನ್ನು ಮಾಡುತ್ತಿದೆಯಾ?**

**ಉತ್ತರ :–** ಹಾಗೆಂದು ಆತ್ಮ ಎಲ್ಲದಕ್ಕೂ ಸಮಾಧಾನ ನೀಡುತ್ತದೆಂದು ನಾನು ಹೇಳಲಿಲ್ಲ. ದೇವರ ಮಾರ್ಗದಲ್ಲಿ ಪ್ರಯಾಣಿಸುವವರಿಗೆ ಸಂಶಯಗಳು ಉಂಟಾದಾಗ, ಅದೂ ಅವನು ಆತ್ಮ ಮೇಲೆ ನಂಬಿಕೆ ಹೊಂದಿದ್ದು, ಉತ್ತರವನ್ನು ಕೇಳಿದಾಗ ಮಾತ್ರವೇ ಒಳಗಿನಿಂದ ಸಮಾಧಾನ ದೊರೆಯುತ್ತಿದೆ. ಈ ವಿಷಯವನ್ನು ಅಂತಿಮ ದೈವಗ್ರಂಥದಲ್ಲಿ ಸೂರಾ 2, ಆಯತ್ 186 ರಲ್ಲಿ ಹೇಳಿದ್ದಾರೆ ನೋಡಿರಿ. **(2–186) "ನನ್ನ ದಾಸರು ನನ್ನನ್ನು ಕುರಿತು ನಿನ್ನನ್ನು ಕೇಳಿದರೇ,**

**ನಾನು ಅವರಿಗೆ ಅತೀ ಸಮೀಪದಲ್ಲಿ ಇದ್ದೇನೆ. ಕರೆಯುವವನು ನನ್ನನ್ನು ಕರೆದಾಗ ನಾನು ಆತನ ಕರೆಯನ್ನು ಕೇಳಿ ಉತ್ತರ ನೀಡುತ್ತೇನೆ. ಆದಕಾರಣ ಅವರು ಸರಿಯಾದ ಮಾರ್ಗ ಪಡೆಯುವುದಕ್ಕೆ ನನ್ನ ಆಜ್ಞೆಯನ್ನು ಅನುಸರಿಸಬೇಕು ಮತ್ತು ನನ್ನಲ್ಲಿ ವಿಶ್ವಾಸ ಹೊಂದಿರಬೇಕು"** ಎಂದು ಹೇಳು.

ದೇವರ ಮಾರ್ಗದಲ್ಲಿ ಪ್ರಯಾಣಿಸುವವನಿಗೆ ಮಾತ್ರ ದೇವರು (ಆತ್ಮ) ಅವನ ಮಾತಿಗೆ ಸಮಾಧಾನ ನೀಡುವನೆಂದು ತಿಳಿಸಿದ್ದಾನೆ. ದೇವರು (ಆತ್ಮ) ಹೇಳಿದಂತೆ ನಡೆದುಕೊಳ್ಳುವವನು ಸರಿಯಾದ ಮಾರ್ಗವನ್ನು ಪಡೆಯುವನೆಂದು ತಿಳಿಸಿದ್ದಾನೆ. ಇಲ್ಲಿ ಕೇಳಿದ ಪ್ರಶ್ನೆಗೆ ಅದೂ ದೈವ ಸಂಬಂಧವಾದ ಅವುಗಳಿಗೇ ಉತ್ತರ ಸಿಗುವುದೆಂದು ಹೇಳಿದ್ದಾನೆ. ಹೇಳುವವನು ದೇವರೆಂದು ದೇವರ ಗೌರವಾರ್ಥ ಹೇಳಿದ್ದೇವೆ ಹೊರತು ವಾಸ್ತವವಾಗಿ ಆತ್ಮವೇ ಉತ್ತರ ನೀಡುವುದೆಂದು ತಿಳಿಯಬೇಕು. ದೇವರು ಶರೀರದಲ್ಲಿರುವ ಯಾರೊಂದಿಗೂ ಮಾತನಾಡುವವನಲ್ಲ, ಯಾರಿಗೂ ಉತ್ತರ ನೀಡುವುದಿಲ್ಲ. ಜೀವಿಗೆ ಅತ್ಯಂತ ಸಮೀಪದಲ್ಲಿ ಇರುವವನು ಆತ್ಮವೇ. ದೇವರು ಮಾತನಾಡುವುದಿಲ್ಲ, ಮಾತನಾಡುವವನು ಆತ್ಮ ಒಬ್ಬನು ಮಾತ್ರ. ಆದ್ದರಿಂದ ಸರಿಯಾದ ದೇವರ ಮಾರ್ಗದಲ್ಲಿ ಪ್ರಯಾಣಿಸಬೇಕೆಂದು ಅಂದುಕೊಂಡವನು ಸಂಶಯಗಳ ಮಧ್ಯೆ ಸಿಲುಕಿಕೊಂಡಾಗ, ಅವನು ನನ್ನನ್ನು (ಆತ್ಮನನ್ನು) ನೆನೆದಾಗ ನಾನು ಅವನ ಸಂಶಯಕ್ಕೆ ಉತ್ತರ ನೀಡುತ್ತೇನೆ. ಆಗ ಅತನು ಸರಿಯಾದ ಜ್ಞಾನವನ್ನು ಹೊಂದಿ ಸಕ್ರಮವಾಗಿ ಪ್ರವರ್ತಿಸಬಹುದು. ಬಹಳಜನರಿಗೆ ಶರೀರದಲ್ಲಿನ ಆತ್ಮವೇ ಉತ್ತರ ನೀಡುತ್ತದೆಂದು ತಿಳಿದಿಲ್ಲ. ಜೀವಿಯೊಂದಿಗೆ ಸಹ, ದೇವರೊಂದಿಗು ಸಹ ಶರೀರದಲ್ಲಿ ಆತ್ಮವಿದೆ ಎಂಬ ವಿಷಯವು ತಿಳಿಯದೆ ಹೋಗುವುದು ಅಜ್ಞಾನದಲ್ಲಿ ಮೊದಲ ಅಜ್ಞಾನವಾಗುವುದು. ಆತ್ಮ ಪ್ರಬೋಧವಿರುತ್ತದೆ ಎಂದು ತಿಳಿಯದವರು ಅಂತರ್ಮುಖವಾಗಿ ಪ್ರಶ್ನೆಯನ್ನು ಕೇಳಲಾರರು. ಪ್ರಶ್ನೆ ಕೇಳಿದಾಗಲೇ ಉತ್ತರ ಲಭ್ಯವಾಗುವುದು ಎಂದು ಹೇಳಿದ್ದಾರೆ. ಇರುವ ವಾಸ್ತವವು ಸಹ ಅಷ್ಟೇ!

ಭಗವಂತನು ಭೂಮಿಮೇಲೆ ಇರುವಾಗ ಮನುಷ್ಯನಿಗೆ ಪ್ರತ್ಯಕ್ಷವಾಗಿ ಸಮಾಧಾನ ಹೇಳಬಲ್ಲನು. ಭಗವಂತನು ಭೂಮಿಮೇಲೆ ಇಲ್ಲದಿರುವಾಗ ಜ್ಞಾನದ ಮೇಲೆ ಶ್ರದ್ಧೆ ಹೊಂದಿರುವ ನಿಜವಾದ ದೈವಭಕ್ತನಿಗೆ ಸರಿಯಾದ ಸಮಾಧಾನ ಹೊರಗೆ ಯಾರಬಳಿಯೂ ಇಲ್ಲದಿರುವಾಗ ಶರೀರದಲ್ಲಿನ ಆತ್ಮವೇ ಉತ್ತರ ಹೇಳಬೇಕು. ಆದ್ದರಿಂದ ಅಂತಿಮ ದೈವಗ್ರಂಥದಲ್ಲಿನ ವಾಕ್ಯದಲ್ಲಿ **"ನನ್ನ ದಾಸರು ನನ್ನನ್ನು ಕುರಿತು ಕೇಳಿದಾಗ"** ಎಂದಿದ್ದಾನೆ. 'ನನ್ನ ದಾಸರು' ಎಂದರೇ 'ನನ್ನ ಭಕ್ತರು' ಎಂದು ಅರ್ಥ. ನನ್ನ ಭಕ್ತರು ಎಂದು ಯಾರನ್ನು ಹೇಳಿದ್ದಾರೆಂದರೆ ಆತ್ಮ ಮೇಲೆ ವಿಶ್ವಾಸ ಹೊಂದಿರುವವರೆಂದು ಅರ್ಥ. **"ನನ್ನನ್ನು ಕೇಳಿದರೇ ನಾನು ಅವರ ಕರೆಯನ್ನು ಕೇಳಿ ಉತ್ತರ ನೀಡುತ್ತೇನೆ"** ಎಂದು ಹೇಳಿದ್ದಾರೆ. ಆತ್ಮ ಮೇಲೆ ನಂಬಿಕೆ ಇರುವವನು ಆತ್ಮವನ್ನು ಕೇಳಿದರೇ 'ಅವನ ಕರೆಯನ್ನು' ಎಂದರೇ ಅವನು ಕೇಳಿರುವುದಕ್ಕೆ ಉತ್ತರ ನೀಡುತ್ತೇನೆ ಎಂದಿದ್ದಾನೆ. ಹಾಗೆ ಕೊಟ್ಟ ಉತ್ತರ ಮನುಷ್ಯನನ್ನು ಸರಿಯಾದ ಜ್ಞಾನ ಮಾರ್ಗದಲ್ಲಿ ನಡೆಸಬಲ್ಲದು. ಇದು ಆತ್ಮವನ್ನು ನಂಬಿ, ಆತ್ಮ ಶರೀರವನ್ನು ನಡೆಸುವುದೇ ಅಲ್ಲದೇ, ಸರ್ವ ಜ್ಞಾನಗಳು ಆತ್ಮಕ್ಕೆ ತಿಳಿದಿದೆಯೆಂದು ತಿಳಿದವನಿಗೆ ಆತ್ಮ ಆತನ ಅಂತರಂಗದಲ್ಲಿಯೇ ಆತ್ಮಜ್ಞಾನವನ್ನು ಬೋಧಿಸುವುದು.

ನಾನು ಅನೇಕ ಸಮಯಗಳಲ್ಲಿ ಜ್ಞಾನ ಹೇಳುವಾಗ, 'ನಾನು ಹೇಳಿರುವ ಜ್ಞಾನವು ಯಾರಿಗೂ ತಿಳಿಯದಿರುವುದಾಗಿ, ಹೊಸದಾಗಿರುವಾಗ ಇದು ನನಗೆ ನನ್ನೊಳಗಿನವನು ತಿಳಿಸಿದಾಗ ನನಗೆ ತಿಳಿದಿದೆ ಎಂದು' ಹೇಳಿದ್ದೇವೆ. ನನ್ನಲ್ಲಿ ನನಗೆ ಅತ್ಯಂತ ಸಮೀಪದಲ್ಲಿರುವವನಾದ ಆತ್ಮ ತಿಳಿಸಿದ ವಿಷಯಗಳನ್ನು ಅನೇಕವು ನಾನು ಗ್ರಂಥಗಳಲ್ಲಿ ಬರೆಯುವುದು ನಡೆದಿದೆ. ಉಪನ್ಯಾಸಗಳಲ್ಲಿ ಹೇಳುವುದು ನಡೆದಿದೆ. ನನ್ನ ಜೀವನದಲ್ಲಿ ಮೊದಲಿನಿಂದ ಇಂದಿನವರೆಗು ಅದೇ ನಡೆದಿದೆ. ಆದ್ದರಿಂದ ನನ್ನೊಳಗಿನವನು (ಆತ್ಮ) ತಿಳಿಸಿರುವುದೆಂದು ಬಹಳ ಸಲ ಹೇಳಿರುವುದಾಗಿದೆ. ಮಧ್ಯ ದೈವಗ್ರಂಥವಾದ ಸುವಾರ್ತೆಗಳಲ್ಲಿ ಯೇಸು **"ನಿನ್ನ ಪಕ್ಕದವನನ್ನು ಪ್ರೀತಿಸು"** ಎಂದು ಹೇಳಿದ್ದಾನೆ. ಅಲ್ಲಿ 'ಪಕ್ಕದವನು'

ಎಂದು ಆತ್ಮವನ್ನೇ ಹೇಳಿದ್ದಾನೆ. ಭಗವದ್ಗೀತೆಯಲ್ಲಿ ಸುಮಾರು 250 ಶ್ಲೋಕಗಳಲ್ಲಿ ಆತ್ಮವನ್ನು ಕುರಿತು ಹೇಳಿದಂತೆ ಇದೆ. ಈ ವಿಧವಾಗಿ ಮೂರು ಗ್ರಂಥಗಳಲ್ಲಿ ಆತ್ಮವನ್ನು ಕುರಿತು ಹೇಳಿದ್ದರೇ ನನ್ನ ಅನುಭವದಲ್ಲಿ ನನಗೆ ತಿಳಿಯದ ಜ್ಞಾನವೆಲ್ಲಾ ಆತ್ಮವೇ ಹೇಳಿರುವಾಗ, ಉಳಿದ ಜ್ಞಾನಿಗಳೆನ್ನುವವರು ಆತ್ಮವನ್ನು ಕುರಿತು ಯಾಕೆ ನಂಬುವುದಿಲ್ಲವೋ ತಿಳಿಯುತ್ತಿಲ್ಲ.

**ಪ್ರಶ್ನೆ :– ಅಂತಿಮ ದೈವಗ್ರಂಥದಲ್ಲಿ ತನ್ನ ದಾಸರಿಗೆ ಮಾತ್ರ ಅವರ ಕರೆಯನ್ನು ಕೇಳಿ, ಅವರ ಅಭ್ಯರ್ಥನೆಗೆ ಸರಿಯಾದ ಉತ್ತರ ನೀಡುತ್ತೇನೆಂದು, ಜೀವಿಗೆ ಶರೀರದಲ್ಲಿಯೇ ಅತಿ ಸಮೀಪವಾಗಿರುವ ಆತ್ಮ ಹೇಳಿರುವಂತೆ ಇದೆ. ತನ್ನ ಭಕ್ತರಿಗೆ ಮಾತ್ರ ದಾರಿ ತೋರುವ ಆತ್ಮ, ಉಳಿದ ದೇವತಾ ಭಕ್ತರಿಗೆ ದಾರಿತೋರುವು ದಿಲ್ಲವೆಂದೇ ಅಲ್ಲವೇ ಅರ್ಥ. ಯಾವ ಕಾರ್ಯ ಮಾಡಿದರೂ ಶರೀರದಲ್ಲಿ ಆತ್ಮವೇ ಮಾಡಬೇಕು ಎಂದು ಇದೆ. ಹಾಗಿರುವಾಗ ಅಜ್ಞಾನಿಗಳಾದವರಿಗೆ ಕೇಳದೇನೇ ದಾರಿ ತೋರಬಹುದು ಅಲ್ಲವೇ! ಅವರು ಆತ್ಮವಾದ ತನ್ನನ್ನು ಕುರಿತು ತಿಳಿದಿಲ್ಲವೆಂದುಕೊಂಡು ತಾನೇ ಸ್ವತಃವಾಗಿ ದಾರಿ ತೋರಿಸಬಹುದು ಅಲ್ಲವೆ! ಆತ್ಮ ದಾರಿ ತೋರದೇ ಹೋದರೇ ಅಜ್ಞಾನಿಗಳ ದಾರಿ ಯಾವಕಡೆಗೆ ಹೋಗುವುದು?**

**ಉತ್ತರ :–** ಹೊರಗೆ ಪ್ರಪಂಚದಲ್ಲಿನ ವಿದ್ಯಾಲಯಗಳಲ್ಲಿ ವಿದ್ಯಾರ್ಥಿಗಳನ್ನು ನೋಡಿದರೇ ಅವರು ಓದುತ್ತಿರುವ ವಿದ್ಯೆಯಲ್ಲಿ ಉತ್ತೀರ್ಣರಾಗುವವರು (ಪಾಸ್ ಆಗುವವರು) ಇದ್ದಾರೆ. ಹಾಗೆಯೇ ಅನುತ್ತೀರ್ಣವಾಗುವವರು (ಫೇಲ್ ಆಗುವವರು) ಇದ್ದಾರೆ. ಒಂದೇ ತರಗತಿಯಲ್ಲಿ ಒಂದೇ ಬೋಧನೆಯಲ್ಲಿ ಕೆಲವರಿಗೆ ಪಾಸ್ ಅಂಕಗಳು ಬಂದರೇ, ಕೆಲವರಿಗೆ ಫೇಲ್ ಅಂಕಗಳು ಬರುತ್ತಿವೆ. ಇದನ್ನನುಸರಿಸಿ ಒಂದೇ ತರಗತಿ, ಒಬ್ಬನೇ ಬೋಧಕನು, ಒಂದೇ ಬೋಧನೆ ಇದ್ದರೂ ಪಾಸ್, ಫೇಲ್ ಎಂಬ ಎರಡು ವಿಧದವರು ತಯಾರಾಗುತ್ತಿದ್ದಾರೆ. ಪಾಸ್ ಆದವನಿಗೆ, ಫೇಲ್ ಆದವನಿಗೆ ಏನು ವ್ಯತ್ಯಾಸ ಎಂದರೆ ಹೇಳಿರುವ ಬೋಧನೆಯಲ್ಲಿ ವ್ಯತ್ಯಾಸ ಇಲ್ಲ ಆದರೇ, ಅವನಿಗಿರುವ ಶ್ರದ್ಧೆಯಲ್ಲಿ ವ್ಯತ್ಯಾಸವಿದೆ. ಶ್ರದ್ಧೆ ಚೆನ್ನಾಗಿರುವವನು ಪಾಸ್ ಆಗಿದ್ದಾನೆ, ಶ್ರದ್ಧೆ ಕಡಿಮೆ ಇದ್ದವನು ಫೇಲ್

ಆಗಿದ್ದಾನೆಂದು ಹೇಳಬಹುದು. ಇವರಲ್ಲಿ ಇನ್ನೂ ವಿವರವಾಗಿ ನೋಡಿದರೇ ಪಾಸ್ ಅಂಕಗಳು 40 ರಿಂದ ಮೇಲಿರುವಾಗ, ಪಾಸಾದವರಲ್ಲಿ 41 ಅಂಕಗಳು ಬಂದು ಪಾಸ್ ಆದವರಿದ್ದಾರೆ. 50 ಅಂಕಗಳು ಬಂದವರು, 60 ಅಂಕಗಳು ಬಂದವರು 70, 80, 90 ಅಂಕಗಳು ಬಂದು ಪಾಸಾದವರೂ ಇದ್ದಾರೆ. ಪಾಸಾದವರೆಲ್ಲರು ಅಂಕಗಳಲ್ಲಿ ಒಂದೇ ಸ್ಥಾನದವರಲ್ಲ ಎಂದು ಆರು ಅಥವಾ ಏಳು ವಿಧಗಳ ಸ್ಥಾನದವರಿದ್ದಾರೆಂದು ತಿಳಿಯುತ್ತಿದೆ. ಅದೇ ವಿಧವಾಗಿ ಫೇಲ್ ಆದವರಲ್ಲಿ ಸಹ ಅವರಿಗೆ ಬಂದಿರುವ ಅಂಕಗಳನ್ನು ಅನುಸರಿಸಿ ವಿದ್ಯೆಯಲ್ಲಿ ಅವರ ಸ್ಥಾನಗಳು ಬೇರೆಬೇರೆಯಾಗಿ ಇವೆಯೆಂದು ಹೇಳಬಹುದು.

ಅದೇ ವಿಧವಾಗಿ ಅಂತರಂಗದಲ್ಲಿರುವ ಜ್ಞಾನ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಗಳಾಗಿ ಇರುವವರು ಅವರವರ ಜ್ಞಾನದಲ್ಲಿ ಅನೇಕ ಸ್ಥಾನದಲ್ಲಿರುವಂತೆ ತಿಳಿಯುತ್ತಿದೆ. ದೈವ ಭಕ್ತರೆಂದೂ ಅಥವಾ ಜ್ಞಾನಿಗಳೆಂದೂ ಹೇಳಿಕೊಳ್ಳುವ ವರೆಲ್ಲರನ್ನೂ ಸ್ವಾಮಿಗಳ ಬಳಿಯಿಂದ ಸನ್ಯಾಸಿಗಳವರೆಗು ಲೆಕ್ಕಿಸಿ ನೋಡಿದರೇ ಎಲ್ಲರೂ ಜ್ಞಾನವೆಂಬ ವಿಶ್ವವಿದ್ಯಾಲಯದಲ್ಲಿ ವಿದ್ಯಾಥಿಗಳಾಗಿಯೇ ಇದ್ದಾರೆ. ಜ್ಞಾನಿಗಳ ವಿಶ್ವವಿದ್ಯಾಲಯವು ಅವರವರ ಶರೀರಗಳಲ್ಲಿಯೇ ಪ್ರತಿಷ್ಠಾಪಿಸಲ್ಪಟ್ಟಿದೆ. ಶರೀರವೆಂಬ ವಿಶ್ವವಿದ್ಯಾಲಯದಲ್ಲಿ ಆತ್ಮವೇ ಬೋಧಕನಾಗಿ ಇದೆ. ಭಗವದ್ಗೀತೆ ಯಲ್ಲಿ ಜ್ಞಾನಯೋಗದಲ್ಲಿರುವ 39ನೇ ಶ್ಲೋಕದಲ್ಲಿ **"ಶ್ರದ್ಧಾವಾನ್ ಲಭತೇ ಜ್ಞಾನಂ"** ಎಂದು ಹೇಳಿರುವಹಾಗೆ ನಾವು ಭಕ್ತರು, ಸ್ವಾಮಿಗಳು, ಜ್ಞಾನಿಗಳು ಎನ್ನುವವರಿಗೆ ಇರುವ ಶ್ರದ್ಧೆಯನ್ನು ಅನುಸರಿಸಿ ಅವರಿಗೆ ಜ್ಞಾನ ಲಭ್ಯವಾಗುವುದು, ಮುಕ್ತಿ ಸಿಗುವುದು ನಡೆಯುತ್ತದೆಂದು ಹೇಳಿದ್ದಾರೆ. ಅದರ ಪ್ರಕಾರವೇ ಶರೀರದಲ್ಲಿರುವ ವಿಶ್ವವಿದ್ಯಾಲಯದಲ್ಲಿ ಮನುಷ್ಯರಿಗಿರುವ ಶ್ರದ್ಧೆಯನ್ನು ಅನುಸರಿಸಿ ಅವನಿಗೆ ಆತ್ಮ ತನ್ನ ಜ್ಞಾನವನ್ನು ಬೋಧಿಸುತ್ತಿದೆ. ಇಲ್ಲಿ ಮುಖ್ಯವಾಗಿ ಗಮನಿಸಿಕೊಳ್ಳಬೇಕಾದ ವಿಷಯವೊಂದಿದೆ. ಅದು ಏನೆಂದರೇ!

ಜ್ಞಾನ ಇರುವವರಿಗೆ, ಜ್ಞಾನ ಇಲ್ಲದವರಿಗೆ ಎಲ್ಲರಿಗೂ ಆತ್ಮವೇ ಶರೀರವೆಂಬ ವಿಶ್ವವಿದ್ಯಾಲಯದಲ್ಲಿ ಬೋಧಿಸುವುದು ನಡೆಯುತ್ತಿದೆ.

ಮನುಷ್ಯರಿಗಿರುವ ಶ್ರದ್ಧೆಯನ್ನು ಅನುಸರಿಸಿ ಅವನಿಗೆ ಯಾವುದು ಅವಶ್ಯವೋ ಅದನ್ನೇ ಬೋಧಿಸುತ್ತಿದೆ. ಜ್ಞಾನಿಗಳಾದವರು ಆತುರದಿಂದ ಕೇಳಿದವರಿಗೆ ತಕ್ಕ ಜ್ಞಾನವನ್ನು ತಿಳಿಸಿದರೇ, ಶ್ರದ್ಧೆಯಿಲ್ಲದವರು ಕೇಳದಿದ್ದರೂ ಅವನ ಶ್ರದ್ಧೆಯನ್ನು ಅನುಸರಿಸಿ ಅವನಿಗೆ ಏನು ಅವಶ್ಯವೋ ಅದನ್ನೇ ಆತ್ಮ ತಿಳಿಸುತ್ತಿದೆ. ಶರೀರ ವಿಶ್ವವಿದ್ಯಾಲಯದಲ್ಲಿ ಆತ್ಮವೇ ಎಲ್ಲಾ ಮಾಡುತ್ತಿದ್ದರೂ, ಮಾಡುವ ಕೆಲಸಗಳನ್ನು ಎಂದರೇ ನಡೆದ ಕೆಲಸಗಳನ್ನು ಆತ್ಮ ಮಾಡಿದೆ ಎಂದು ಹೇಳದೇ ದೇವರು ಮಾಡಿದ್ದಾನೆಂದು, ದೇವರ ಮೇಲಿನ ಗೌರವಾರ್ಥವಾಗಿ ಆತ್ಮವೇ ಹೇಳುತ್ತಿದೆ. ಶರೀರದಲ್ಲಿ ಮನುಷ್ಯ ಎನ್ನುವಂತೆ ತಿಳಿಯುವ ಪ್ರತಿಮಾತನ್ನು ಕೆಲಸಮಾಡುವ ಆತ್ಮವೇ ಮಾತನಾಡುತ್ತಿದೆ. ಆತ್ಮ ಅಡಗಿರುತ್ತದೆ, ಹೊರಬೀಳುವುದಲ್ಲ. ಆದ್ದರಿಂದ ತಾನು ಮಾಡುವ ಎಲ್ಲಾ ಕೆಲಸಗಳನ್ನು ದೇವರ ಮೇಲಿಟ್ಟು, ದೇವರೇ ಮಾಡುತ್ತಿದ್ದಾನೆಂದು ಎಲ್ಲರಿಂದ ಮಾತನಾಡಿಸುತ್ತಿದ್ದಾನೆ. ಈ ವಿಷಯವಾಗಿ ಇದು ದೇವರ ಮೇಲೆ ಗೌರವಾರ್ಥವೇ ಹೊರತು ವಾಸ್ತವವಾಗಿ ದೇವರು ಏನೂ ಮಾಡಲಿಲ್ಲ. ದೇವರು ಏನೂ ಮಾಡುವವನಲ್ಲ, ಕ್ರಿಯಾರಹಿತನೆಂದು ಹೇಳಿಕೊಂಡಿದ್ದೇವೆ. ದೇವರು ಮಾಡದವನಾಗಿ ಇದ್ದರೂ, ಆತ್ಮ ಎಲ್ಲಾ ಮಾಡುವುದಾಗಿ ಇದ್ದರೂ ದೇವರ ಮೇಲೆ ಗೌರವದಿಂದ ಆತ್ಮ ಹಾಗೆ ಹೇಳಿದೆ ಎಂದುಕೊಳ್ಳಬೇಕು.

ಶರೀರದಲ್ಲಿ ನಿವಾಸಿಸುವ ಜೀವಿಗಳೆಲ್ಲರಿಗೂ ಯಾರಿಗೆ ಏನು ಅವಶ್ಯವೋ ಅವರ ಕರ್ಮವನ್ನು ಅನುಸರಿಸಿ ಅವರಿಗೆ ಅದು ಲಭಿಸುವಂತೆ ಮಾಡುತ್ತಿದೆ. ಯಾರು ಕೇಳದಿದ್ದರೂ ಅವರಿಗೆ ತಿಳಿಯದಂತೆ, ಅವರ ಹಿಂದೆಯಿದ್ದು ಅವರ ಕರ್ಮಫಲಿತವನ್ನು ಅನುಸರಿಸಿ ಅದನ್ನು ಮಾಡುವುದು, ಮಾತನಾಡುವುದು ಆತ್ಮ ಮಾಡುತ್ತಿದೆ. ಅಜ್ಞಾನಿಗಳಾದವರಿಗೆ ತಮ್ಮನ್ನು ಆತ್ಮ ನಡೆಸುತ್ತಿದೆ ಎಂದು ತಿಳಿಯದಿದ್ದರೂ, ಅವರನ್ನು ಸ್ವತಃವಾಗಿ ಆತ್ಮವೇ ನಡೆಸುತ್ತಿದೆ, ಕೇಳದಿದ್ದರೂ ಉತ್ತರ ಹೇಳುತ್ತಿದೆ. ಈ ವಿಧವಾಗಿ ಶರೀರವೆಂಬ ಯಂತ್ರಕ್ಕೆ ಆತ್ಮ ಡ್ರೈವರಾಗಿ ಇದೆ. ಜ್ಞಾನ ವಿಷಯದಲ್ಲಿ "ಶ್ರದ್ಧಾವಾನ್ ಲಭತೇ ಜ್ಞಾನಂ" ಎಂಬ ಸೂತ್ರದ

ಪ್ರಕಾರ ಅಜ್ಞಾನಿಗಳಿಗೆ ಯಾವ ಜ್ಞಾನವು ಅವಶ್ಯವೋ, ಜ್ಞಾನಿಗಳಿಗೆ ಎಷ್ಟು ಜ್ಞಾನ ಅವಶ್ಯವೋ ಅಷ್ಟು ಜ್ಞಾನವನ್ನು ತಿಳಿಸುತ್ತಿದೆ. ಮೇಲಾಗಿ ಕೇಳುವ ಜ್ಞಾನಿಗಳಿಗು ಸಹ ಉತ್ತರ ಹೇಳುತ್ತಿದೆ. ಯಾರು ಕೇಳಿದರೂ ಉತ್ತರ ಹೇಳಬಲ್ಲ ಆತ್ಮ ಯಾರಿಗೆ ಯಾವುದು ಅವಶ್ಯವೋ ಅದನ್ನೇ ಹೇಳಬಲ್ಲದು. ಜ್ಞಾನಿಗಳಲ್ಲಿ ಎಷ್ಟೋ ವ್ಯತ್ಯಾಸವಿದೆ. ಅವರಲ್ಲಿ ಸಂಪೂರ್ಣ ಜ್ಞಾನಿಗಳಿದ್ದಾರೆ, ಅಸಂಪೂರ್ಣ ಜ್ಞಾನಿಗಳು ಇದ್ದಾರೆ. 100 ಅಂಕಗಳಿರುವವರು ಇದ್ದಾರೆ. 40, 50, 60 ಅಂಕಗಳಿರುವವರು ಇದ್ದಾರೆ. ಜ್ಞಾನಿಗಳಲ್ಲಿ ಅವರ ಜ್ಞಾನವನ್ನು ಅವರಿಗೆ ಸ್ಥಾನವನ್ನು ನಿರ್ಣಯಿಸುವವನು ಆತ್ಮವೇ. ನನ್ನ ಸಲುವಾಗಿ ಆತ್ಮ ಹೇಗೆ ವರ್ತಿಸುತ್ತಿದೆಯೋ ನನಗೆ ಚೆನ್ನಾಗಿ ತಿಳಿದಿದೆ. **ಎಲ್ಲರನ್ನು ನಡೆಸುವುದೂ, ಅಳಿಸುವುದೂ, ನಗಿಸುವುದೂ, ರೆಚ್ಚಗೊಳಿಸುವುದೂ, ನಿರುತ್ಸಾಹಪಡಿಸುವುದೂ ಎಲ್ಲಾ ಆತ್ಮವೇ ಆದರೂ ಎಲ್ಲಾ ದೇವರೇ ಮಾಡುತ್ತಿದ್ದಾನೆಂದು ಎಲ್ಲರೂ ಅಂದುಕೊಳ್ಳುವುದು ನಡೆಯುತ್ತಿದೆ.** ಜ್ಞಾನಿಗಳಿಗೆ, ಅಜ್ಞಾನಿಗಳಿಗೆ ಯಾವ ಒಬ್ಬರಿಗೂ ತಮ್ಮಲ್ಲಿದ್ದು ಎಲ್ಲಾ ಮಾಡುತ್ತಿರುವ ಆತ್ಮ ಮೇಲೆ ದೃಷ್ಠಿ ಹರಿಸಲಿಲ್ಲ. ನನ್ನ ವಿಷಯ ಹೇಳಿದರೇ ನಾನು ಸುಮಾರು 40 ವರ್ಷಗಳ ಕೆಳಗೇ ಆತ್ಮವನ್ನು ತಿಳಿದುಕೊಂಡಿದ್ದೇನೆ. ಆಗಲೇ ನಮ್ಮ ಶರೀರದಲ್ಲಿ ಮೂರು ಆತ್ಮಗಳಿವೆ ಎಂದು ಹೇಳುತ್ತಾ ಬಂದಿದ್ದೇನೆ. ಆದರೂ ನನ್ನ ಮಾತನ್ನು ಯಾರೂ ಲೆಕ್ಕಿಸಲಿಲ್ಲ. ಇಲ್ಲಿಗೆ 38 ವರ್ಷಗಳ ಹಿಂದೆ ಮೂರು ಆತ್ಮಗಳ ಸಿದ್ಧಾಂತವನ್ನು ಪ್ರತಿಪಾದಿಸಿ, ಅದಕ್ಕೆ ಅದ್ವೈತ, ದ್ವೈತದಹಾಗೆ ತ್ರೈತಸಿದ್ಧಾಂತವೆಂದು ಹೆಸರು ಇಡುವುದು ನಡೆದಿದೆ. ಅಂದಿನಿಂದ ಇಂದಿನವರೆಗು ಒಂದೇ ತ್ರೈತಸಿದ್ಧಾಂತದ ಮೂಲಕ ಸುಮಾರು 80 ಗ್ರಂಥಗಳನ್ನು ಬರೆದಿದ್ದೇವೆ. ಈಗ 75ನೇ ಗ್ರಂಥವಾಗಿ **"ವಿಶ್ವ ವಿದ್ಯಾಲಯ"** ಎಂಬ ಗ್ರಂಥವನ್ನು ಬಿಡುಗಡೆ ಮಾಡುತ್ತಿದ್ದೇವೆ. ಅತಿ ಶೀಘ್ರದಲ್ಲಿ ನೂರು ಗ್ರಂಥಗಳನ್ನು ನನ್ನಲ್ಲಿನ ಆತ್ಮವೇ ಪೂರ್ತಿ ಮಾಡಬೇಕೆಂದುಕೊಂಡಿದೆ.

ಸುಮಾರು 40 ವರ್ಷಗಳಿಂದ ತ್ರೈತಸಿದ್ಧಾಂತದ ಪ್ರಕಾರ ಜೀವಾತ್ಮ, ಪರಮಾತ್ಮ ಮಧ್ಯದಲ್ಲಿ ಆತ್ಮ ಇದೆಯೆಂದು ಹೇಳುತ್ತಿದ್ದರೂ ನನ್ನ ಮಾತನ್ನು

ಕೇಳದವರು, ನನ್ನ ಮಾತಿನಲ್ಲಿನ ಸತ್ಯವನ್ನು ಗ್ರಹಿಸದವರು ನನ್ನನ್ನು ತ್ರಿತ್ವವನ್ನು ಬೋಧಿಸುವ ಕ್ರೈಸ್ತನೆಂದಿದ್ದಾರೆ. ಎಷ್ಟೋ ಜನ ನನ್ನನ್ನು ದೂಷಣೆಯಾಗಿ ಮಾತನಾಡಿ ಪರಮತವನ್ನು ಬೋಧಿಸುತ್ತಿದ್ದಾನೆಂದು ಆರೋಪಣೆಗಳು ಮಾಡಿದ್ದಾರೆ. ಆದರೂ ಅವರಲ್ಲಿ ಹಾಗಿದ್ದು ಅನ್ನುವವರೂ ಸಹ ಆತನೇ (ಆತ್ಮವೇ) ಎಂದು ನನಗೆ  ತಿಳಿದಿದೆ. ಹಾಗೆ ವಿರುದ್ಧವಾಗಿ ಮಾತನಾಡಿದಾಗ, ನನಗೆ ವಿರುದ್ಧವಾಗಿ ಕೆಲಸ ಮಾಡಿದಾಗ ಆತ್ಮವನ್ನು ಮರೆತುಹೋಗಿ ನನಗೆ ವಿರುದ್ಧತೆ ಮಾಡಿದವರು, ಮಾತನಾಡಿದವರು ಮನುಷ್ಯರೇ ಎಂದು ಅಂದುಕೊಳ್ಳುತ್ತೇನೇನೋ ಎಂದು ಪರೀಕ್ಷಿಸುವುದಕ್ಕೆ ಹಾಗೆ ಮಾಡಿದರೂ, ನಾನು ಆತ್ಮನನ್ನು ಮರೆತುಹೋಗಿ ಮನುಷ್ಯರು ಮಾಡಿದ್ದಾರೆಂದು ಅಂದುಕೊಳ್ಳಲಿಲ್ಲ. ಭವಿಷ್ಯತ್ತಿನಲ್ಲಿ ಯಾವುದೋ ಬದಲಾವಣೆಗೆ, ಅದೂ ನನ್ನ ಹಿತಕ್ಕಾಗಿ, ಆತ್ಮವೇ ಹಾಗೆ ಮಾಡಿದ್ದಾನೆಂದು ಅಂದುಕೊಂಡಿದ್ದೇನೆ. ನಾನು ಅಂದುಕೊಂಡಂತೆ ಹಾಗೆಯೇ ನಡೆದಿದೆ. ಯಾವ ಕಡೆಯಿಂದ ಏನು ನಡೆದರೂ, ಯಾರಿಂದ ಏನು ಮಾತುಗಳು ಬಂದರೂ, ಅವೆಲ್ಲಾ ಹೊರಗಿನವೇ ಆದರೂ ಎಲ್ಲಾ ಆತ್ಮ ಮಾತುಗಳು, ಆತ್ಮ ಕೆಲಸಗಳು ಎಂದು ಈಗಲೇ ಅಲ್ಲ, ಎಂದಿಗೂ ಅಂದುಕೊಳ್ಳುತ್ತೇನೆ. ಕಾಣಿಸದೆ ಹೋದರೇ ಇಣಿಕಿ ನೋಡಬೇಕು. ಚೆನ್ನಾಗಿ ಕಾಣಿಸುವಾಗ ಇಣಿಕಿ ನೋಡಬೇಕಾದ ಕೆಲಸವಿಲ್ಲ. ಹಾಗೆಯೇ ತಿಳಿಯದೇ ಹೋದರೇ ಮಾಡಿದ್ದು ಯಾರೆಂದು ಇತರರನ್ನು ಅಂದುಕೊಳ್ಳಬೇಕು. ಕಾಣಿಸುವಾಗ ಇತರರನ್ನು ಅಂದುಕೊಳ್ಳಬೇಕಾದ ಕೆಲಸವಿಲ್ಲ. **ಮಾಡಿದವನು, ಮಾಡುವವನು, ಮುಂದೆ ಮಾಡುವವನು ಆತ್ಮವೇ** ಆಗಿರುವಾಗ, ಆತ್ಮವೇ ಎಂದು ತಿಳಿದಾಗ, ನಾನು ಇತರರನ್ನು ಕುರಿತು ಯಾಕೆ ಅಂದುಕೊಳ್ಳಬೇಕು? ಒಳಗುಟ್ಟು ಬಹಿರಂಗವಾದಾಗ ಬಹಿರಂಗವನ್ನು ಒಳಗುಟ್ಟು ಎಂದು ಯಾಕೆ ಅಂದು ಕೊಳ್ಳಬೇಕು?

ನಾನು ಬಹುಶಃ 1999ನೇ ವರ್ಷದ ಆರಂಭದಲ್ಲಿ ಇಲ್ಲಿಗೆ 50 ಕಿಲೋಮೀಟರುಗಳ ದೂರದಲ್ಲಿರುವ ಎರಡು ಅಕ್ಷರಗಳ ಹೆಸರಿನಿಂದಿರುವ

ಊರಿನಲ್ಲಿ ಭಗವದ್ಗೀತೆಯನ್ನು ಬರೆಯುವುದು ನಡೆದಿದೆ. ನಾನು ಹುಟ್ಟಿರುವ ಕುಲಕ್ಕೆ ಮನೆ ಹೆಸರು **'ಗುತ್ತಾ'** ಎಂದು ಇದೆ. ಒಂದುಕಾಲದಲ್ಲಿ ಗುತ್ತಾ ಎಂಬ ಹೆಸರಿದ್ದು, ನಂತರ ಅದಕ್ಕೆ ಹತ್ತಿರ ಹೆಸರಾಗಿ ಬದಲಾವಣೆ ಹೊಂದಿದ ಊರಿನಲ್ಲಿ ಭಗವದ್ಗೀತೆಗೆ ಭಾವಾರ್ಥವನ್ನು ಬರೆಯಬೇಕೆಂದುಕೊಂಡು, ಆ ಊರಿನಲ್ಲಿ ಸೇರಿ ಎರಡು ಪಕ್ಕಪಕ್ಕದ ಮನೆಗಳನ್ನು ಬಾಡಿಗೆಗೆ ತೆಗೆದುಕೊಂಡು, ಒಂದು ಮನೆಯಲ್ಲಿ ಹೆಂಡತಿಮಕ್ಕಳಿರುವಾಗ, ಮತ್ತೊಂದು ಮನೆ ಭಗವದ್ಗೀತೆಯನ್ನು ಬರೆಯುವುದಕ್ಕೇ ಉಪಯೋಗಿಸಿಕೊಳ್ಳುತ್ತಿದ್ದೆನು. ಮನೆ ಯಜಮಾನಿಗೆ ಪ್ರತಿ ತಿಂಗಳು ಬಾಡಿಗೆ ಹಣವನ್ನು ಸಲ್ಲಿಸುತ್ತಾ ಯಾವ ಲೋಪವಿಲ್ಲದೇ ಭಗವದ್ಗೀತೆ ಯನ್ನು ಬರೆಯುವುದು ನಡೆದಿದೆ. ಭಗವದ್ಗೀತೆ ಬರೆಯುವುದು ಮುಗಿದು ಹೋಗಿದೆ. ದೇವರ ಸೇವೆ ಮಾಡಿದ್ದೇನೆಂದು ತೃಪ್ತಿಯಾಗಿರುವ ಆ ಸಮಯದಲ್ಲಿ ಮನೆ ಯಜಮಾನಿಗೆ ನಾವೆಂದರೇ ಸರಿಹೋಗುತ್ತಿಲ್ಲ. ನಾವು ರಾತ್ರಿಯೆಲ್ಲಾ ಎಚ್ಚರದಲ್ಲಿದ್ದು ಕೆಲಸ ಮಾಡುವುದು, ಗ್ರಂಥ ಬರೆಯುವುದು ಅವರಿಗೆ ಇಷ್ಟವಾಗಲಿಲ್ಲ. ವಾಸ್ತವವಾಗಿ ಯಾವ ವಿಷಯದಲ್ಲಿ ಇಷ್ಟವಾಗಲಿಲ್ಲವೋ ನಮಗೆ ತಿಳಿದಿಲ್ಲ ಆದರೇ ಆಕೆ ಮನೆ ಖಾಲೀ ಮಾಡಿರೆಂದು ಹೇಳುವುದಾಗಿದೆ. ಆಗ ಇಷ್ಟು ಒಳ್ಳೆಯದಾಗಿದ್ದು ಪರಿಸರ ಪ್ರಾಂತವೆಲ್ಲವನ್ನೂ ಶುಭ್ರವಾಗಿಟ್ಟು ನಿಜಾಯಿತಿಯಾಗಿದ್ದರೂ ಯಾಕೆ ಹೀಗೆ ನಡೆದಿದೆ? ಎಂದು ಸ್ವಲ್ಪ ದುಃಖಃಕರವಾದ ಆಲೋಚನೆ ಬರಬೇಕಾಯಿತು. ಯಾರಾದರೂ ಹಾಗೆಯೇ ಅಂದುಕೊಳ್ಳುತ್ತಾರೆ. ಆದರೂ ನನಗೆ ಅಂತಹ ಆಲೋಚನೆ ಬರಲಿಲ್ಲ.

ನನಗೆ ಬಂದಿರುವ ಆಲೋಚನೆಯ ಪ್ರಕಾರ ಎಲ್ಲರಲ್ಲೂ ಇರುವವನು, ಎಲ್ಲರಲ್ಲೂ ಮಾತನಾಡುವವನು, ಎಲ್ಲರನ್ನೂ ಆಡಿಸುವವನು ಮನೆ ಯಜಮಾನಿಯಲ್ಲಿದ್ದು ನಮ್ಮನ್ನು ಮನೆ ಖಾಲೀ ಮಾಡಿರೆಂದು ಹೇಳಿದನು. ನಾನು ಬಾಡಿಗೆ ಮನೆಯಲ್ಲಿದ್ದು ಭಗವದ್ಗೀತೆಯನ್ನು ಬರೆಯುವುದು ಸರಿಹೋಗಿರಲಿಲ್ಲ. ಆತನು ಯಾವುದೋ ಬದಲಾವಣೆ ತರುವುದಕ್ಕೆ ಇಲ್ಲಿಂದ ಕದಲಿಸಬೇಕೆಂದು ಅಂದುಕೊಳ್ಳುತ್ತಿದ್ದಾನೆಂದು ಅಂದುಕೊಂಡೆನು. ಅಂದಿನ

ಪರಿಸ್ಥಿತಿಯನ್ನು ಅನುಸರಿಸಿ ಒಳಗೆ ಆತ್ಮವೇ ಉಂಟುಮಾಡಿದ ಯೋಚನೆಯ ಮೂಲಕ ಆ ಊರನ್ನೇ ಪೂರ್ತಿಯಾಗಿ ಬಿಟ್ಟು ಹೈದಾರಾಬಾದ್ ಪಕ್ಕದಲ್ಲಿರುವ ಕೊತ್ತಕೋಟ ಎಂಬ ಊರಿಗೆ ಸೇರುವುದು ನಡೆದಿದೆ. ಗುತ್ತಿಯಿಂದ ಹೈದರಾಬಾದ್ 300 ಕಿಲೋಮೀಟರುಗಳಿರುವಾಗ ಸರಿಯಾಗಿ 150 ಕಿಲೋಮೀಟರುಗಳ ಮಧ್ಯ ದೂರದಲ್ಲಿರುವ ಊರಿಗೆ ಸೇರುವುದು ನಡೆದಿದೆ. ಅದು ಸಹ ಆತ್ಮವೊಂದರ ಪ್ರಣಾಳಿಕೆಯೆಂದೇ ಅಂದುಕೊಂಡೆನು. ಅಲ್ಲಿ ನನ್ನ ಬಳಿಯಿರುವ ಅವರೆಲ್ಲರನ್ನೂ ಇಟ್ಟು ಹೈದರಾಬಾದ್ ಸೇರುವುದು, ನಂತರ ಅಲ್ಲಿ ಒಂದು ಮನೆ ಕೊಳ್ಳುವುದು, ಒಂದರ ನಂತರ ಒಂದು ಏಳು ಮನೆಗಳನ್ನು ಕೊಳ್ಳುವುದು ನಡೆಯಿತು. ಇದೆಲ್ಲಾ ನಡೆಯುವುದಕ್ಕೆ ಬುನಾದಿಯಾಗಿ ಅಲ್ಲಿ ಇತರರಿಂದ ವಿರುದ್ಧವಾಗಿ ಮಾತನಾಡಿದವನು ಆತ್ಮವೇ ಎಂದು, ನನಗೆ ಒಳ್ಳೆಯದು ಮಾಡುವುದಕ್ಕೇ ಹಾಗೆ ವಿರುದ್ಧತೆ ತೋರಿಸಿದ್ದಾನೆಂದು ಅರ್ಥವಾಯಿತು. ಈ ವಿಧವಾಗಿ ಮನುಷ್ಯನ ಜೀವನದಲ್ಲಿ ಆತ್ಮ ಅನುಕೂಲವಾಗಿ ಒಂದು ಕಾಲದಲ್ಲಿ, ವಿರುದ್ಧವಾಗಿ ಒಂದುಕಾಲದಲ್ಲಿ ಮಾಡುವುದು ಮಾತನಾಡುವುದು ನಡೆಯುತ್ತಿರುತ್ತದೆ. **ಎಲ್ಲಾ ಆತ್ಮವೇ ಮಾಡುತ್ತಿದೆ ಎಂಬ ನೆನೆಪು ಇರುವವನಿಗೆ ಎಲ್ಲಾ ಒಳ್ಳೆಯದೇ ನಡೆಯುತ್ತದೆ.** ನನ್ನ ಅನುಭವದಲ್ಲಿ ಹೀಗೆ ಎಷ್ಟೋ ನಡೆದಿವೆ. ಎಲ್ಲಾ ತಂದೆಯಾದ ಆತ್ಮವೇ ಮಾಡುತ್ತಿದ್ದಾನೆಂದು ಅಂದುಕೊಂಡಿದ್ದೇನೆ.

ಈ ದಿನ ಸಂಸ್ಕೃತ ಶ್ಲೋಕಗಳಿಗೆ ವಿವರ ಬರೆಯಲಾದ ಭಗವದ್ಗೀತೆಗಳು ಸುಮಾರು ಮುನ್ನೂರು ಮೇಲಿನ ಮಾತಾಗಿಯೇ ಇವೆ. ಅವುಗಳನ್ನು ಎಷ್ಟೋ ದೊಡ್ಡ ಸ್ವಾಮೀಜಿಗಳು ಜ್ಞಾನದಲ್ಲಿ ಅನುಭವವಿರುವ ವ್ಯಕ್ತಿಗಳು, ದೊಡ್ಡ ಗುರುವಾಗಿ ಹೆಸರುವಾಸಿಯಾದವರು ಬರೆದಿದ್ದಾರೆ. ಆದರೂ ಅವುಗಳಲ್ಲಿ ಸರಿಯಾದ ವಿವರವಿಲ್ಲವೆಂಬ ಭಾವನೆಯಿಂದ ನಾನು ಭಗವದ್ಗೀತೆಗೆ ವಿವರವನ್ನು ಬರೆಯಬೇಕೆಂದುಕೊಳ್ಳುವುದು ನಡೆದಿದೆ. ಸಂಸ್ಕೃತ ಶ್ಲೋಕಗಳಿಗೆ ವಿವರ ಬರೆಯಬೇಕೆಂದರೇ ಮೊದಲು ಸಂಸ್ಕೃತ ಭಾಷೆಯನ್ನು ಕಲಿತಿರಬೇಕು. ನನಗೆ ಸಂಸ್ಕೃತ ಭಾಷೆ ಪರಿಚಯವೇ ಇಲ್ಲ. ತೆಲುಗು ಪದಗಳಿಗು ಸಹ ಸರಿಯಾದ

ಅರ್ಥ ತಿಳಿಯದವನು. ಹನ್ನೊಂದನೆಯ ತರಗತಿ ಓದಿರುವವನು, ಮೇಲಿನ ವಿದ್ಯೆಗಳು ಸಹ ತಿಳಿಯದವನು, ಸಂಸ್ಕೃತ ಶ್ಲೋಕಗಳಿಗೆ ವಿವರ ಬರೆಯುವುದೇನು? ಎಂಬ ಪ್ರಶ್ನೆ ಒಂದುಕಡೆ ಇದ್ದರೂ ಬರೆಯುವವನು ನಾನಲ್ಲ! ನನ್ನ ಕೈಯಿಂದ ಬರೆಯಲ್ಪಡುವ ಭಗವದ್ಗೀತೆಯನ್ನು ಬರೆಯುವವನು ಆತ್ಮವೇ ಎಂದು ತಿಳಿದು, ವಿಶ್ವವಿದ್ಯಾಲಯ ಬೋಧಕನೇ ಬರೆಯುವ ಭಗವದ್ಗೀತೆ ದೊಡ್ಡದಾಗಿರುತ್ತದೆ ಎಂದು ಅಂದುಕೊಂಡಿದ್ದೆನು. ಇದಕ್ಕು ಮೊದಲು ಬರೆದವರಲ್ಲಿ ಸಹ ಆತ್ಮವೇ ಬರೆದಿರುವುದರಿಂದ ಸತ್ಯವೇ ಆದರೂ, ಅವರ ಭಾವನೆಗಳು ಬೇರೆಯಾಗಿ ಇರುವುದರಿಂದ, ನಾವು ಬರೆಯುತ್ತಿದ್ದೇವೆ ಎಂಬ ಭಾವನೆ ಅವರಲ್ಲಿ ಇರುವುದರಿಂದ, ಅವರಲ್ಲಿ ಹೇಗೆ ಬರೆಯಬೇಕೋ ಹಾಗೆಯೇ ಬರೆದಿರುತ್ತದೆ. ಈಗಲೂ ಸಹ "ನನ್ನೊಳಗಿಂದ ಬರೆಯುವ ಆತ್ಮ ಏನು ಬರೆಯುವುದೋ ನಾನು ಸಹ ತಿಳಿಯಬಹುದು" ಎಂದು ಅಂದುಕೊಂಡೆನು.

ನಾನು ಏನೂ ತಿಳಿಯದ ಅಜ್ಞಾನಿಯಾಗಿ ಇರುವಾಗ, ಭಗವದ್ಗೀತೆ ಬರೆಯುವುದಕ್ಕೆ ಆತ್ಮ ಸಜ್ಜಾದಾಗ, ಮೊದಲಲ್ಲೇ 'ಅರ್ಜುನ ವಿಷಾದಯೋಗ' ಎಂಬ ಅಧ್ಯಾಯವು ಭಗವದ್ಗೀತೆ ಅಲ್ಲವೆಂದು, ಮೊದಲ ಅಧ್ಯಾಯಕ್ಕೆ ವಿವರ ಬರೆಯದೆ ನೇರವಾಗಿ ಎರಡನೆಯ ಅಧ್ಯಾಯ ಆರಂಭ ಮಾಡುವುದು ನನಗೆ ಆಶ್ಚರ್ಯವಾಗಿದೆ. ಅದಕ್ಕೆ ಸಂಬಂಧಿಸಿದ ವಿವರವನ್ನು 'ರೋಗಿ, ವೈದ್ಯನು' ಎನ್ನುವವರ ಮಧ್ಯೆ ನಡೆದ ಸಂಭಾಷಣೆಯಲ್ಲಿ **ಚಿಕಿತ್ಸೆ ಯಾರದು?, ರೋಗ ಯಾರದು**? ಎಂದು ಪ್ರಶ್ನೆಯನ್ನು ಕೇಳಿ ರೋಗವು ರೋಗಿದು, ಚಿಕಿತ್ಸೆ ವೈದ್ಯನದು ಆಗಿರುವುದರಿಂದ ಚಿಕಿತ್ಸೆ ಜಾಗದಲ್ಲಿ ರೋಗವನ್ನು ಹೇಳಬಾರದೆಂದು ವಿವರವನ್ನು ತಿಳಿಸಿ, ಭಗವದ್ಗೀತೆ ಎಂದರೇ ಅರ್ಜುನನಿಗೆ ಕೃಷ್ಣನಿಗೆ ಮಧ್ಯೆ ನಡೆದ ಕೃಷ್ಣನ ಮಾತುಗಳನ್ನೇ ಭಗವದ್ಗೀತೆ ಎನ್ನಬೇಕೆಂದು, ಅರ್ಜುನನು ಹೇಳಿರುವುದು ವಿಷಾದ ಮಾತ್ರ ಅದು ನಮಗೆ ಅವಶ್ಯವಿಲ್ಲ. ಭಗವದ್ಗೀತೆ ಇದೇ ಎಂದು ಹದಿನೇಳು ಅಧ್ಯಾಯಗಳ ವಿವರವನ್ನು ಬರೆಯುವುದು ಪ್ರಥಮವಾಗಿಯೇ ರಚಯಿತನಾದ ಆತ್ಮ ದೊಡ್ಡತನವೇ ಎಂದು ಹೇಳಬಹುದು.

ಭಗವದ್ಗೀತೆಯನ್ನು ಸಾಂಖ್ಯಯೋಗದಲ್ಲಿ ಹನ್ನೊಂದನೆಯ ಶ್ಲೋಕದಿಂದ ಆರಂಭ ಮಾಡಿದಾಗ ಮೊದಲ ಶ್ಲೋಕದಲ್ಲಿನ ವಿವರವನ್ನು ಭೂಮಿಮೇಲೆ ತಯಾರಾದ ಭಗವದ್ಗೀತೆಗಳೆಲ್ಲವುಕ್ಕಿಂತಲೂ ಪ್ರತ್ಯೇಕವಾಗಿ ಬರೆಯುವುದು, ಅಲ್ಲಿ ಯಾರೂ ಹೇಳಲಾರದ ವಿವರವನ್ನು ಹೇಳುವುದನ್ನು ನೋಡಿದರೇ ಆತ್ಮವೆಂದರೆ ಏನೋ, ಆತನ ಭಾವನೆ ಹೇಗಿರುತ್ತದೋ ಅರ್ಥವಾಗಬಲ್ಲದು. ಯಾರ ಊಹೆಗು ತಿಳಿಯದ ವಿವರವನ್ನು ಅಲ್ಲಿ ಬರೆದಿದ್ದಾನೆಂದರೇ ಅದೊಂದು ಪ್ರತ್ಯೇಕವಾದ ಭಾವನೆಯಾಗಿ ತಯಾರಾಗಿದೆ. ಆ ಶ್ಲೋಕಕ್ಕೆ ಅರ್ಥ ಬರೆದಾಗ ನಾನು ಅದನ್ನು ನೋಡಿ ಮೊಟ್ಟಮೊದಲನೆಯದಾಗಿ ನಾನು ಆ ವಿವರವನ್ನು ತಿಳಿದಿರುವುದಕ್ಕೆ ಎಷ್ಟೋ ಸಂತೋಷಪಟ್ಟಿದ್ದೇನೆ. ಇತರರು ನಂತರ ಓದಬಹುದು, ಆದರೂ ಅವರೆಲ್ಲರೂ ನನ್ನ ನಂತರ ಓದಿದವರಾಗುತ್ತಾರೆ. ನನ್ನ ಶರೀರದಲ್ಲಿನ ಆತ್ಮ ಬರೆಯುವುದರಿಂದ ಎಲ್ಲರಿಗಿಂತಲೂ ಮೊದಲು ಓದುವ ಭಾಗ್ಯ ದೊರೆತಿದೆ. ಈಗ ಈ ನನ್ನ ಮಾತನ್ನು ಕೇಳುವವರಿಗು ಸಹ ಸ್ವಲ್ಪ ಅರ್ಥವಾಗಿ, ಸ್ವಲ್ಪ ಅರ್ಥವಾಗದೆ ಇರಬಹುದು. ಭಗವದ್ಗೀತೆಯನ್ನು ಬರೆದಿರುವುದು ನಾನಲ್ಲ ಎಂಬ ಸತ್ಯವನ್ನು ನೀವು ನಂಬಿದರೆ ನನ್ನ ಮಾತುಗಳು ಅರ್ಥವಾಗಬಲ್ಲವು. ನಿಮಗೆ ಅರ್ಥವಾದರೂ, ಆಗದಿದ್ದರೂ ನಾನು ಹೇಳುವ ಮಾತುಗಳು ನೂರಕ್ಕೆ ನೂರುಪಾಲು ಸತ್ಯ.

ಹನ್ನೊಂದನೆಯ ಶ್ಲೋಕದಿಂದ ಆರಂಭಮಾಡಿದ ವಿಶ್ವವಿದ್ಯಾಲಯ ಅಧಿಪತಿಯಾದ ಆತ್ಮ ಮತ್ತೊಂದು ಹನ್ನೊಂದು ಶ್ಲೋಕಗಳಿಗೆ ವಿವರವನ್ನು ಬರೆದು 22ನೇ ಶ್ಲೋಕದ ಬಳಿಗೆ ಹೋದಾಗ, **'ವಾಸಾಂಸೀ ಜೀರ್ಣಾಣಿ'** ಎಂಬ ಆ ಶ್ಲೋಕಕ್ಕೆ ಭಾವನೆಯನ್ನು ಬರೆದು ಹೊಸ ಅದ್ಭುತವನ್ನು ಸೃಷ್ಟಿಸಿದ್ದಾನೆ. ಪ್ರಪಂಚದಲ್ಲಿ ಎಷ್ಟು ದೊಡ್ಡ ರಚಯಿತರ ಬಳಿ ಸಹ ಆ ಭಾವನೆಯನ್ನು ಬರೆಯಲಿಲ್ಲ. ಆ ಶರೀರಗಳಲ್ಲಿ ರಚನೆಕಾರರ ಭಾವನೆಗಳು ಇರುವುದರಿಂದ ಆತ್ಮ ಅವರ ಭಾವನೆಗಳಿಗೆ ತಕ್ಕಂತೆ ಸರ್ವಸಾಧಾರಣವಾಗಿ ವಿವರವನ್ನು ಬರೆದಿದ್ದಾನೆ ಹೊರತು ಇಲ್ಲಿ ನನ್ನಬಳಿ ಬರೆದಂತೆ ಬರೆಯಲಿಲ್ಲ. ನನ್ನ ಶರೀರದಲ್ಲಿ

ನನ್ನ ಭಾವನೆಗಳು ಏನೂ ಇಲ್ಲದಿರುವುದರಿಂದ ಇರುವ ಭಾವನೆಯೆಲ್ಲಾ ಆತ್ಮದೇ ಆಗಿರುವುದರಿಂದ, ಸ್ವಚ್ಛವಾದ ಆತನ ಭಾವನೆಯನ್ನೇ ಬರೆಯುವುದು ನಡೆದಿದೆ. ಆದ್ದರಿಂದ ಅಲ್ಲಿ ಶ್ಲೋಕಕ್ಕೆ ಬರೆದ ಭಾವನೆಯೊಂದರ ರಹಸ್ಯವನ್ನು ಅರ್ಥ ಮಾಡಿಕೊಳ್ಳುವುದಕ್ಕೇ ಬುರುಡೆಗಳು ಸಾಲುವುದಿಲ್ಲ. ಒಂದು ಶ್ಲೋಕಕ್ಕೆ 42 ಪುಟಗಳ ವಿವರವನ್ನು ಬರೆದು ಸೈನ್ಸಿಗೇ ಸೈನ್ಸಾದ ಸೂಪರ್ ಸೈನ್ಸ್ ಹೇಗಿರುತ್ತದೋ ತಿಳಿಸಿದನು. ಅದು ಯಾರೂ ನೋಡದ ಕೇಳದ ತಿಳಿಯದ ವಿವರ ಅಥವಾ ರಹಸ್ಯವೆಂದು ಹೇಳಬಹುದು. ಇದಕ್ಕು ಮೊದಲು ಯಾವ ಭಗವದ್ಗೀತೆಯಲ್ಲೂ ತಿಳಿಯದ ರಹಸ್ಯವನ್ನು ಆ ಶ್ಲೋಕದಲ್ಲಿ ತಿಳಿಸುವುದಾಗಿದೆ. ಪ್ರಪಂಚದಲ್ಲಿ ಪ್ರತ್ಯಕ್ಷವಾಗಿ ಇದೆ, ಆದರೂ ಇಲ್ಲಿಯವರೆಗು ಯಾರಿಗೂ ತಿಳಿಯದ ರಹಸ್ಯವಾಗಿ ಇದೆ ಎಂದರೇ, ಆ ಶ್ಲೋಕವೊಂದರ ವಿವರವನ್ನು ನೀವೇ ಓದಿ ನೋಡಿರಿ. ಅಷ್ಟುದೊಡ್ಡ ವಿವರವನ್ನು ಕೇವಲ ಹನ್ನೊಂದು ಶ್ಲೋಕಗಳ ನಂತರವೇ ತಿಳಿಸುವುದು ನಾನು ಮಾಡಿಕೊಂಡಿರುವ ಅದೃಷ್ಟದಿಂದ ಎಲ್ಲರಿಗಿಂತಲೂ ಮೊದಲು ನನಗೆ ಅರ್ಥವಾಗಿದೆ ಎಂದುಕೊಂಡಿದ್ದೇನೆ. ಬಹಳ ಜನರಿಗೆ ನಮ್ಮ ರಚನೆಯಾದ **"ತ್ರೈತ ಸಿದ್ಧಾಂತ ಭಗವದ್ಗೀತೆ"**ಯನ್ನು ಓದಿದವರಿಗೆ ಇಂತಹ ಶ್ಲೋಕಗಳ ಭಾವನೆಗಳು ಎಷ್ಟೋ ಅರ್ಥವಾಗಲಿಲ್ಲವೆಂದು ಹೇಳಬಹುದು.

ನಾನು ಮುಸ್ಲಿಮ್‌ರ ಪವಿತ್ರ ಗ್ರಂಥವಾದ "ಅಂತಿಮ ದೈವಗ್ರಂಥ" ಎಂದು ಹೆಸರುವಾಸಿಯಾದ ಖುರಾನ್ ಗ್ರಂಥವನ್ನು ಬರೆಯುವುದು ನಡೆದಿದೆ. ಹಿಂದೂಗಳು ಯಾರೂ ಮುಸ್ಲಿಮ್ ಗ್ರಂಥಗಳನ್ನು ಮುಟ್ಟುವುದೂಇಲ್ಲ. ಆದರೂ ನಾನು ಹಿಂದೂವಾಗಿ ಮುಸ್ಲಿಮ್‌ರಿಗೇ ಅರ್ಥವಾಗದ ಖುರಾನ್‌ನನ್ನು ಬರೆಯುವುದು ನಡೆದಿದೆ. ಇಲ್ಲಿ 'ನಾನು' ಎಂದು ನಿಮಗೆ ಅರ್ಥವಾಗುವುದಕ್ಕೆ ಹೇಳುತ್ತಿದ್ದೇವೆ. ನಮ್ಮಲ್ಲಿದ್ದು ಬರೆದಿರುವುದು ಆತ್ಮವೇ ಎಂದು ಮರೆಯಬಾರದು. ಇಲ್ಲಿ ಭಗವದ್ಗೀತೆಯಲ್ಲಿ ಎಷ್ಟೋ ಸಂಚಲನೆಯ ವಿಷಯಗಳನ್ನು ಹೊಸದಾಗಿ ಹೇಳಿದಂತೆ, ಖುರಾನ್ ಗ್ರಂಥದಲ್ಲಿನ ಆಯತ್‌ಗಳಿಗೆ ವಿವರವನ್ನು ಹೇಳುವು ದಾಗಿದೆ. ಯಾರಿಗೂ ಸಹಿಸಿಕೊಳ್ಳಲಾರದವು, ಇಲ್ಲಿಯವರೆಗು ಅರ್ಥವಾಗದ

ವಿಷಯಗಳನ್ನು ವಿವರವಾಗಿ ಹೇಳುವುದಾಗಿದೆ. ಭಗವದ್ಗೀತೆಯಲ್ಲಿ ಸಾಂಖ್ಯಯೋಗದಲ್ಲಿ 22ನೇ ಶ್ಲೋಕವೊಂದರ ವಿವರ ಸಾವಿರ ವರ್ಷಗಳು ವಿಜ್ಞಾನ ಪರಿಶೋಧನೆಗಳು ಮಾಡಿದರೂ ತಿಳಿಯದ ರಹಸ್ಯವಾಗಿ ಇದೆ. ಅದೇ ಶ್ಲೋಕದಹಾಗೆ ಖುರಾನ್‌ನಲ್ಲಿ ಸೂರಾ ಆರರಲ್ಲಿ, ಆಯತ್ 95 ಇದೆ. ಭಗವದ್ಗೀತೆಯಲ್ಲಿ ಶ್ಲೋಕವಿರುವಾಗ ಖುರಾನ್‌ನಲ್ಲಿ ಆಯತ್ (ವಾಕ್ಯ) ಅದೇ ಭಾವನೆ ಹೊಂದಿದೆ. ಭಗವದ್ಗೀತೆಯಲ್ಲಿ ಈ ಶ್ಲೋಕವು ಯಾರಿಗೂ ಅರ್ಥವಾಗದಿರುವಾಗ, ಖುರಾನ್‌ನಲ್ಲಿ ಆ ವಾಕ್ಯ ಯಾರಿಗೂ ಅರ್ಥವಾಗದ್ದಾಗಿದೆ ಎಂದು ಹೇಳುವುದರಲ್ಲಿ ಆಶ್ಚರ್ಯ ಏನೂ ಇಲ್ಲ. ಭಗವದ್ಗೀತೆಯನ್ನು ಓದಿದರೂ, ವಿವರವನ್ನು ಓದಿದರೂ ಇರುವುದು ಓದಬಲ್ಲರೇನೋ ಹೊರತು ಇಲ್ಲದಿರುವುದನ್ನು, ಅಡಗಿರುವುದನ್ನು ಕುರಿತು ಯಾರೂ ಆಲೋಚಿಸುವುದಿಲ್ಲ. ಮುಸ್ಲಿಮ್‌ರಲ್ಲಿ ಬಹಳಜನ ಕೇಳುವವರೇ ಹೊರತು ಓದುವವರು ಕಡಿಮೆ. ಓದುವವರಿದ್ದರೂ ಸಹ ಅವರಿಗೆ ಬಂದ ಭಾಷೆಯಲ್ಲಿ ಅಲ್ಲದೇ ಅರಬ್ಬೀ ಭಾಷೆಯಲ್ಲಿ ಓದಬೇಕೆಂಬ ನಿಯಮವಿದೆ. ಅರಬ್ಬೀ ಭಾಷೆಯಲ್ಲಿ ಓದುವುದರಿಂದ ಆ ಭಾಷೆ ಅರ್ಥ ತಿಳಿಯದಿರುವುದರಿಂದ ಖುರಾನ್‌ನಲ್ಲಿನ ಈ ವಾಕ್ಯವೊಂದರ ವಿವರವು ಯಾರಿಗೂ ತಿಳಿದಿಲ್ಲ. ಭಗವದ್ಗೀತೆಯಲ್ಲಿ ಹೇಳಿರುವ ಶ್ಲೋಕವು ಖುರಾನ್‌ನಲ್ಲಿ ಆಯತ್ ರೂಪವಾಗಿ ಇರುವಾಗ ಬೈಬಲ್ ಗ್ರಂಥದಲ್ಲಿ ಆ ವಿಷಯವೇ ಹೇಳಲಿಲ್ಲ. ಹಿಂದೂಗಳಲ್ಲಿದ್ದರೂ, ಮುಸ್ಲಿಮ್‌ಗಳಲ್ಲಿ ಇದ್ದರೂ ಅದು ಅರ್ಥವಾಗಲಿಲ್ಲ, ವಿವರವನ್ನು ಯಾರೂ ಹೇಳಲಿಲ್ಲ, ಬೈಬಲ್‌ನಲ್ಲಿ ಅಸಲಿಗೇ ಇಲ್ಲ. ಆದ್ದರಿಂದ **"ಗರ್ಭಸ್ಥ ಶಿಶುವಿಗೆ ಪ್ರಾಣವಿಲ್ಲ"** ಎಂಬ ವಿಷಯವು ಪ್ರಪಂಚಕ್ಕೇ ತಿಳಿಯಲಿಲ್ಲವೆಂದು ಹೇಳಬಹುದು. ಯಾವತ್ ಪ್ರಪಂಚಕ್ಕೇ ತಿಳಿಯದ ರಹಸ್ಯ ನನಗೆ ನನ್ನಿಂದ ಬರೆಯಲಾದ ಭಗವದ್ಗೀತೆಯಲ್ಲಿ ತಿಳಿಸುವುದು ನನ್ನ ಅದೃಷ್ಟ ಅಲ್ಲವೇ! ಈ ವಿಧವಾಗಿ ನನ್ನ ಕೈಯಿಂದ ಬರೆಯಲಾದ ಭಗವದ್ಗೀತೆಯಲ್ಲಿ ಎಷ್ಟೋ ರಹಸ್ಯಗಳು ಹೊರಬಿದ್ದಿವೆ. ನೀವು ಓದಿದರೇ ವಾಸ್ತವ ತಿಳಿಯುತ್ತದೆ.

ಮಾನವ ಶರೀರವು ವಿಶ್ವವಿದ್ಯಾಲಯವಾದಾಗ, ಅದರಲ್ಲಿ ಬೋಧಕನು ಆತ್ಮವೆಂದು ಹೇಳಿದ್ದೇವೆ. ವಿದ್ಯಾಥಿಗಳು ಜೀವಾತ್ಮಗಳಾದಾಗ, ಎಲ್ಲವನ್ನೂ ನೋಡುವ ಪರ್ಯವೇಕ್ಷನಾಧಿಕಾರಿಯಾಗಿ ಪರಮಾತ್ಮನಿದ್ದಾನೆ. ಶರೀರವು ವಿದ್ಯಾಲಯವಾದರೇ ಅದಕ್ಕೆ ಅಧಿಪತಿ ಆತ್ಮ. ಪ್ರಪಂಚದಲ್ಲಿ ಪ್ರತಿ ಜೀವಿಗೆ ಪ್ರತ್ಯೇಕವಾದ ಶರೀರವಿರುವುದರಿಂದ ಅವನಿಗೆ ಪ್ರತ್ಯೇಕವಾದ ವಿದ್ಯಾಲಯ ವಿದೆಯೆಂದು ಹೇಳಬಹುದು. ಹೊರಗೆ ವಿದ್ಯಾಲಯಗಳಲ್ಲಿ ಎಷ್ಟು ಜನ ವಿದ್ಯಾರ್ಥಿಗಳಾದರೂ ಇರಬಹುದು. ಆದರೇ ಜೀವಿಯ ವಿಷಯಕ್ಕೆ ಬಂದರೇ ಒಬ್ಬೊಬ್ಬನಿಗೆ ಒಂದೊಂದು ಶರೀರಕೊಟ್ಟು ಒಂದೊಂದು ವಿದ್ಯಾಲಯವನ್ನು ಏರ್ಪಾಟು ಮಾಡಿದಂತಾಗಿದೆ. **ಪ್ರತಿ ಶರೀರವು ಒಂದು ವಿಶ್ವವಿದ್ಯಾಲಯವೆ** ಪ್ರತಿ ಶರೀರದಲ್ಲಿ ಆತ್ಮ ಬೋಧಕನಾಗಿ, ಚೋಧಕನಾಗಿ, ಕಾರ್ಯಕರ್ತನಾಗಿ ಎಲ್ಲಾ ವಿಧಗಳಲ್ಲಿ ಕೆಲಸ ಮಾಡುತ್ತಿದೆ. ಆ ವಿಧವಾಗಿ ಒಂದು ಜೀವಿಗೆ ಒಂದು ವಿದ್ಯಾಲಯವನ್ನು ಇಟ್ಟಿರುವ ಮೂಲಕ ಜೀವಿಗಳಿಗಿರುವ ಭಾವನೆಗಳನ್ನು ಅನುಸರಿಸಿ ಅವರಿಗೆ ಬೋಧನೆಗಳು ಹೇಳಲಾಗುತ್ತದೆ. ಹಾಗಾಗದಿದ್ದರೇ ಅವರವರ ಭಾವನೆಗಳಿಗೆ ತಕ್ಕಂತೆ ಬೋಧನೆಗಳು ಹೇಳುವುದಕ್ಕೆ ಅವಕಾಶವಿರುವುದಿಲ್ಲ. ಆದ್ದರಿಂದ ಜೀವಿಗಳು ಎಷ್ಟುಜನರಿದ್ದಾರೋ ಅಷ್ಟು ಶರೀರಗಳಿವೆ. ಪ್ರತಿ ಶರೀರವು ಒಂದು ವಿಶ್ವವಿದ್ಯಾಲಯವಾಗಿ ಇದೆ.

ಪ್ರತಿ ಶರೀರದಲ್ಲಿಯು ಬೋಧಕನಾಗಿ ಆತ್ಮವಿದ್ದೂ ತಿಳಿಯದ ವಿಷಯಗಳನ್ನು ಬೋಧನೆಯಾಗಿ ಹೇಳುತ್ತಿದೆ. ಹಾಗೆಯೇ ಪ್ರತಿ ಶರೀರದಲ್ಲಿರುವ ಆತ್ಮ ಶರೀರಕ್ಕೆ ಅಧಿಪತಿಯಾಗಿ ಇದ್ದೂ ಶರೀರವನ್ನು ಯಾವಾಗ ಆರೋಗ್ಯವಾಗಿಡಬೇಕೋ, ಯಾವಾಗ ಅನಾರೋಗ್ಯವಾಗಿ ಇಡಬೇಕೋ ಕರ್ಮ ಪ್ರಕಾರ ಲೆಕ್ಕಿಸಿ ಹಾಗೆಯೇ ಮಾಡುತ್ತಿದೆ. ಆತ್ಮ ಪ್ರತಿ ಶರೀರದಲ್ಲಿ ಕಾರ್ಯಕರ್ತನಾಗಿ ಇದ್ದೂ ಕರ್ಮ ಪ್ರಕಾರ ಜೀವಿಗೆ ಬೇಕಾಗಿರುವ ಪ್ರತಿ ಕೆಲಸವನ್ನು ಮಾಡುತ್ತಿದೆ. ಶರೀರದಲ್ಲಿ ಮಾತುಗಳು ಬಂದವನಾಗಿ ಎಲ್ಲಾ ಮಾತುಗಳನ್ನು ಮಾತನಾಡುತ್ತಿದೆ. ಶರೀರದಲ್ಲಿ ಆತ್ಮ ತಿಳಿಯದವನಾಗಿ ಇದ್ದೂ, ಪ್ರತಿ ಕೆಲಸವನ್ನು ನಾನೇ

ಮಾಡುತ್ತಿದ್ದೇನೆಂದು ಅಜ್ಞಾನಿಗಳಿಂದ ಹೇಳಿಸುತ್ತದೆ. ಕೆಲವರು ಭಕ್ತರಲ್ಲಿ ಪ್ರತಿ ಕಾರ್ಯವನ್ನು ದೇವರೇ ಮಾಡಿಸುತ್ತಿದ್ದಾನೆಂದು ಹೇಳಿಸುತ್ತದೆ. ಕೆಲವರಲ್ಲಿ ವೈದ್ಯನಾಗಿದ್ದು ವೈದ್ಯ ಮಾಡಿಸುತ್ತಾ ಇತರರಿಂದ ಡಾಕ್ಟರವರೆಂದು ಕರೆಯಿಸುತ್ತಿದೆ. ಕೆಲವರಲ್ಲಿ ಹಾಡುಗಳು ಹಾಡುವ ಗಾಯಕನಾಗಿದ್ದು ಹಾಡುಗಳನ್ನು ಹಾಡಿಸುತ್ತದೆ. ನೂರುಜನ ಗಾಯಕರಲ್ಲಿ ನೂರು ವಿಧಗಳಾಗಿ ಇರುವ ಆತ್ಮ ಒಬ್ಬೊಬ್ಬರಿಗೆ ಒಂದೊಂದು ಗಾತ್ರವನ್ನು ಕೊಟ್ಟು ಹಾಡಿಸುತ್ತಾ, ಎಷ್ಟೋ ಜನರಲ್ಲಿ ಎಷ್ಟೋ ವ್ಯತ್ಯಾಸಗಳಿಂದ ತೋರಿಸುತ್ತದೆ. ಎಲ್ಲರೂ ಸಂಗೀತವನ್ನು ಹಾಡುವವರೇ ಆದರೂ ಅವರವರ ಕರ್ಮವನ್ನು ಅನುಸರಿಸಿ ಅವರಲ್ಲಿ ಎಷ್ಟೋ ವ್ಯತ್ಯಾಸಗಳಿಂದ ಹಾಡಿಸಿ ಒಬ್ಬೊಬ್ಬರನ್ನು ಒಂದೊಂದು ಗಾಯಕನಾಗಿ ತೋರಿಸುತ್ತಿದೆ. ಕೆಲವರಲ್ಲಿ ಅಥವಾ ಒಬ್ಬರಲ್ಲಿ ಪ್ರತ್ಯೇಕವಾದ ಗಾತ್ರವನ್ನು ಕೊಟ್ಟು, ಆತ್ಮವೇ ಹಾಡುತ್ತಾ ಅವರನ್ನು ಎಲ್ಲರೂ ಮೆಚ್ಚಿಕೊಳ್ಳುವಂತೆ, ಒಳ್ಳೆಯ ಗಾತ್ರವಿರುವವನೆಂದು ಹೊಗಳುವಂತೆ ಮಾಡುತ್ತಿದೆ. ಈ ವಿಧವಾಗಿ ಪ್ರಪಂಚದಲ್ಲಿ ಕೋಟಿ ಜನರಲ್ಲಿದ್ದು ಕೋಟಿ ಕೆಲಸಗಳನ್ನು ಮಾಡುತ್ತಾ, ಎಲ್ಲರನ್ನೂ ಒಬ್ಬರಿಗೊಬ್ಬರು ಸಂಬಂಧವಿಲ್ಲದಂತೆ ತೋರುತ್ತದೆ. ಎಲ್ಲರಲ್ಲೂ ಒಂದೇ ಆತ್ಮವಿದೆ ಎಂಬ ವಿಷಯವೇ ಯಾರಿಗೂ ತಿಳಿಯದಂತೆ ಮಾಡುತ್ತಿದೆ. ವಿಶ್ವವೆಲ್ಲಾ ಎಲ್ಲಾ ಶರೀರಗಳಲ್ಲಿರುವ ಆತ್ಮ ಒಂದು ಶರೀರದಲ್ಲಿ ಸಹ ತನ್ನ ಇರುವಿಕೆಯನ್ನು ತೋರಿಸಿಕೊಳ್ಳದೇ ಅಡಗಿರುವ ಆತ್ಮವಾಗಿ ಇದೆ. ಆದ್ದರಿಂದ ಆತ್ಮ ತಿಳಿಯದೇ ಹೋಗಿದೆ. ಜೀವಾತ್ಮವಾದ ನಾನೇ ಶರೀರದಲ್ಲಿದ್ದೇನೆಂದು ಪ್ರತಿಯೊಬ್ಬನು ಅಂದು ಕೊಳ್ಳುತ್ತಿದ್ದಾನೆ. ಕೆಲವರು ಮಾತ್ರ ಕೆಲವು ಸಂದರ್ಭಗಳಲ್ಲಿ ತನ್ನೊಂದಿಗೆ ಶರೀರದಲ್ಲಿ ದೇವರು ಸಹ ಇದ್ದಾನೆಂದು ಅಂದುಕೊಳ್ಳುತ್ತಿದ್ದಾರೆ. ಕೆಲವು ಕೆಲಸಗಳನ್ನು ದೇವರು ಮಾಡುತ್ತಿದ್ದಾನೆಂದು ಹೊರಗೆ ಹೇಳುತ್ತಿದ್ದರೂ, ಎಲ್ಲ ಕೆಲಸಗಳು ತಾನೇ ಮಾಡುತ್ತಿರುವಹಾಗೆ ಅಂತರಂಗದಲ್ಲಿ ಅಂದುಕೊಳ್ಳುವುದು ನಡೆಯುತ್ತಿದೆ.

**ಪ್ರಶ್ನೆ :– ಆತ್ಮ ಎಲ್ಲರಲ್ಲೂ ಇದ್ದೂ ಯಾರಲ್ಲೂ ಇಲ್ಲದಹಾಗೆ ಯಾಕೆ ನಟಿಸುತ್ತಿದೆ?**

**ಉತ್ತರ :–** ಆತ್ಮ ಎಲ್ಲರಲ್ಲೂ ಇರುವಮಾತನ್ನು ಮೂರು ದೈವಗ್ರಂಥಗಳಲ್ಲಿ

ಪ್ರತ್ಯಕ್ಷವಾಗಿ ಹೇಳಿದ್ದಾರೆ. ಮೂರು ದೈವಗ್ರಂಥಗಳನ್ನು ಬರೆಯಿಸಿರುವುದು ಆತ್ಮವೇ ಆಗಿರುವುದರಿಂದ ತನ್ನನ್ನು ಕುರಿತು ಗ್ರಂಥಗಳಲ್ಲಿ ಸ್ವಲ್ಪವಾದರೂ ಮುಚ್ಚಿಡದೆ ಪೂರ್ತಿ ಸಮಾಚಾರವನ್ನು ಹೇಳಿದೆ. ಆದರೇ ಅಲ್ಲಿ ಹೇಳಿದಾಗಲೇ ಜ್ಞಾನವನ್ನು, ಅಜ್ಞಾನವನ್ನು ಹೇಳುತ್ತಾ ಜ್ಞಾನಿಗಳು ಮಾತ್ರ ನನ್ನನ್ನು ಗುರುತಿಸುತ್ತಾರೆ, ಅಜ್ಞಾನಿಗಳು ನನ್ನನ್ನು ತಿಳಿಯಲಾರರೆಂದು ಹೇಳಿದ್ದಾನೆ. ಎಲ್ಲರಲ್ಲೂ ಎಲ್ಲಾ ವಿಧಗಳಾಗಿರುವ ತನ್ನನ್ನು ತಿಳಿಯುವುದಕ್ಕೆ ಆಧ್ಯಾತ್ಮಿಕ ಜ್ಞಾನವೆಂಬ ಆತ್ಮಜ್ಞಾನವು ಅವಶ್ಯವೆಂದು ಕೂಡಾ ಹೇಳಿದ್ದಾನೆ. ಜ್ಞಾನವನ್ನು ಅನುಸರಿಸಿ ತನ್ನನ್ನು ತಿಳಿಯಲಾಗುವುದೆಂದು ಗ್ರಂಥಗಳಲ್ಲಿ ಹೇಳಿದ್ದಾನೆ. ಆದ್ದರಿಂದ ಆತ್ಮ ಇಲ್ಲದಹಾಗೆ ನಟಿಸುತ್ತಿಲ್ಲ. ಪ್ರತ್ಯಕ್ಷವಾಗಿದ್ದು ಕೆಲಸಗಳು ಮಾಡುತ್ತಿದೆ. ಆದರೂ ಮನುಷ್ಯರೇ ಅಜ್ಞಾನದಿಂದ ಆತ್ಮವನ್ನು ತಿಳಿಯಲಾರದೆ ಇದ್ದಾರೆ. ಜ್ಞಾನದಿಂದ ತಾನು ತಿಳಿಯುವೆನೆಂದು ಆತ್ಮ ಹೇಳಿರುವಾಗ, ಜ್ಞಾನದಿಂದ ಮನುಷ್ಯರು ಆತ್ಮವನ್ನು ತಿಳಿಯಬಹುದು ಅಲ್ಲವೇ! ಪ್ರಪಂಚದಲ್ಲಿ ಜ್ಞಾನಿಗಳೆಂದು ಹೆಸರಿಟ್ಟುಕೊಂಡವರು ಸಹ ಆತ್ಮ ಜ್ಞಾನ ಇಲ್ಲದವರಾಗಿ, ಅಜ್ಞಾನವೆಂಬ ಕತ್ತಲೆಯಲ್ಲಿದ್ದೂ, ತಾನು ಬೆಳಕಿನಲ್ಲಿದ್ದಂತೆ ಭ್ರಮಿಸುತ್ತಿದ್ದಾರೆ. ತಮ್ಮನ್ನು ತಾವು ಜ್ಞಾನಿಗಳಾಗಿ ವರ್ಣಿಸಿಕೊಳ್ಳುವುದು ನಡೆಯುತ್ತಿದೆ. ಆದ್ದರಿಂದ ಆತ್ಮ ಯಾರಿಗೂ ತಿಳಿಯುತ್ತಿಲ್ಲ.

**ಪ್ರಶ್ನೆ :– ಶರೀರ ವಿದ್ಯಾಲಯವೆಂದೂ, ಅದರಲ್ಲಿ ಬೋಧಿಸಲ್ಪಡುತ್ತಿರುವುದು ವಿಶ್ವವಿದ್ಯೆ ಎಂದೂ, ವಿಶ್ವವಿದ್ಯೆಯನ್ನು ಬೋಧಿಸುವುದು ವಿಶ್ವವಿದ್ಯಾಲಯವೆಂದು ಅನ್ನಬಹುದು ಎಂದಿದ್ದಾರೆ. ನೀವು ಹೇಳಿದಂತೆಯೇ ಮನುಷ್ಯರ ಶರೀರಗಳೆಲ್ಲವೂ ವಿಶ್ವವಿದ್ಯಾಲಯ ಗಳೇ ಆದರೇ, ಈದಿನ ಶರೀರ ಧರಿಸಿರುವವರಲ್ಲಿ ಸುಮಾರು ಶೇಕಡ 99ಕ್ಕಿಂತ ಮೇಲೆ ಅಧರ್ಮವನ್ನೇ ಹೊಂದಿದ್ದಾರೆ. ಅಧರ್ಮವನ್ನು ರೂಪಬದಲಿಸುವುದಕ್ಕೆ ದೇವರು ಭಗವಂತನಾಗಿ ಭೂಮಿಮೇಲಕ್ಕೆ ಬರುವನೆಂದು ನೀವೇ ಹೇಳುತ್ತಿದ್ದೀರ. ಶರೀರವು ವಿಶ್ವವಿದ್ಯಾಲಯವಾದಾಗ, ಆತ್ಮವೇ ಬೋಧಕನಾಗಿರುವಾಗ ಶರೀರ ದಲ್ಲಿಯೇ ಧರ್ಮಗಳನ್ನು ಬೋಧಿಸಿ ಅಧರ್ಮಗಳನ್ನು ಇಲ್ಲದೇ ಮಾಡ ಬಹುದು ಅಲ್ಲವೇ! ಹಾಗೆ ಯಾಕೆ ಮಾಡುತ್ತಿಲ್ಲ?**

**ಉತ್ತರ :–** ಇದು ಒಳ್ಳೆಯ ಪ್ರಶ್ನೆಯೇ! ಒಂದು ಸಮಯದಲ್ಲಿ ನನಗೆ ಇದೇ ಪ್ರಶ್ನೆಯೇ ಬಂದಿದೆ. ಅದಕ್ಕೆ ಆತ್ಮ ಉತ್ತರ ಈ ವಿಧವಾಗಿದೆ, ಶರೀರವು ಪ್ರಕೃತಿ ನಿರ್ಮಿತವಾದುದು. ಪ್ರಕೃತಿಗೆ ಸಂಬಂಧಿಸಿದ ಶರೀರದಲ್ಲಿ ಆತ್ಮ ನಿವಾಸವಿದ್ದೂ ಜ್ಞಾನವನ್ನೋ, ಅಜ್ಞಾನವನ್ನೋ ಬೋಧಿಸುತ್ತಿದೆ. ವಿಶ್ವವೆಲ್ಲಾ ಎಲ್ಲ ಶರೀರಗಳಲ್ಲಿ ಆತ್ಮ ಇರುವುದರಿಂದ, ಕೆಲವು ಶರೀರಗಳಲ್ಲಿ ಆತ್ಮ ತನ್ನ ಧರ್ಮಗಳನ್ನು ಬೋಧಿಸುವುದರಿಂದ ಶರೀರವನ್ನು ವಿಶ್ವವಿದ್ಯಾಲಯವೆಂದು ಹೇಳುತ್ತಿದ್ದೇವೆ. ವಿಶ್ವವಿದ್ಯಾಲಯಗಳು ಎರಡು ವಿಧಗಳೆಂದೂ, ಶರೀರದೊಳಗಿನ ವಿಶ್ವ ವಿದ್ಯಾಲಯವು ಒಂದು ವಿಧವಾಗಿ, ಶರೀರದ ಹೊರಗೆ ಮತ್ತೊಂದು ವಿಶ್ವ ವಿದ್ಯಾಲಯವು ಇದೆಯೆಂದು ಹೇಳಿಕೊಂಡಿದ್ದೇವೆ. ದೇವರು ಭಗವಂತನಾಗಿ ಬಂದಾಗ ಆತನು ಎಲ್ಲಿ ಜ್ಞಾನವನ್ನು ಹೇಳಿದರೇ ಅಲ್ಲೇ ವಿಶ್ವವಿದ್ಯಾಲಯವಿರುತ್ತದೆ ಎಂದು ಹೇಳಿದ್ದೇವೆ. ಈ ವಿಧವಾದ ಎರಡು ವಿದ್ಯಾಲಯಗಳಲ್ಲಿ ಶರೀರದೊಳಗೆ ಇರುವವನಲ್ಲಿ ಮನುಷ್ಯನ (ಜೀವಿಯು) ಕರ್ಮವನ್ನು ಅನುಸರಿಸಿ, ಜೀವಿಯ ಶ್ರದ್ಧೆಯನ್ನು ಅನುಸರಿಸಿ, ಅವನು ಪ್ರಶ್ನಿಸುವುದನ್ನು ಅನುಸರಿಸಿ ಆತ್ಮಜ್ಞಾನವನ್ನು ಹೇಳುತ್ತಿರುತ್ತಾನೆ. ಮುಖ್ಯವಾಗಿ ಹೇಳಿದರೇ ಜೀವಿಯು ಕೋರಿಕೊಂಡ ಜ್ಞಾನವನ್ನೇ ಆತ್ಮ ಹೇಳುತ್ತದೆ. ಮನುಷ್ಯ ಅಜ್ಞಾನ ಮಾರ್ಗವನ್ನು ಕೋರಿಕೊಂಡಾಗ ಆತ್ಮ ಅವನಿಗೆ ಅಜ್ಞಾನವನ್ನೇ ಬೋಧಿಸುತ್ತದೆ. ಅವನ ಆಸಕ್ತಿ ಎಲ್ಲವೂ ಅಜ್ಞಾನ ಮೇಲೆಯೇ ಇದ್ದು ಅಜ್ಞಾನವನ್ನೇ ತಿಳಿಯಬೇಕೆಂದುಕೊಂಡಾಗ ಅವನಿಗೆ ಅಜ್ಞಾನವನ್ನೇ ಆತ್ಮ ಬೋಧಿಸುವುದು. ಈ ವಿಷಯವನ್ನು ಕುರಿತು ದೈವಗ್ರಂಥಗಳಲ್ಲಿ **"ತನಗೆ ಇಷ್ಟವಾದವನಿಗೆ ಆತ್ಮ ಸನ್ಮಾರ್ಗವನ್ನು ತೋರಿಸುತ್ತದೆ. ತನಗೆ ಇಷ್ಟವಿಲ್ಲದವನಿಗೆ ಕೆಟ್ಟ ಮಾರ್ಗವನ್ನು ತೋರಿಸುತ್ತದೆ"** ಎಂದು ಹೇಳಿದ್ದಾರೆ. ದೇವರನ್ನು ಬಿಟ್ಟು ದೇವತೆಗಳ ಕಡೆ ಹೋಗುವವರಿಗೆ, ದೇವರ ವಾಕ್ಯಗಳಿಗೆ ತಪ್ಪು ಅರ್ಥಗಳನ್ನು ಜೋಡಿಸಿ ಪ್ರಜೆಗಳನ್ನು ತಪ್ಪುದಾರಿ ಹಿಡಿಸುವವರನ್ನು, ಆತ್ಮ ಅಜ್ಞಾನವನ್ನೇ ಬೋಧಿಸಿ ತಪ್ಪುದಾರಿ ಹಿಡಿಸುವುದು. ದೇವರ ಮೇಲೆ ಶ್ರದ್ಧೆಯಿರುವವರಿಗೆ ಸರಿಯಾದ ಜ್ಞಾನವನ್ನು ಬೋಧಿಸಿ ಒಳ್ಳೆಯ ಜ್ಞಾನ ಮಾರ್ಗವನ್ನು ಹಿಡಿಸುವುದು. ಆತ್ಮ ಶರೀರದಲ್ಲಿ ಅಧಿಕಾರಿಯಾಗಿ ಇರುವುದರಿಂದ,

ಜ್ಞಾನದ ಮೇಲೆ ಶ್ರದ್ಧೆ ಇರುವವನಿಗೆ ಜ್ಞಾನವನ್ನೇ ಹೇಳಿ ಜ್ಞಾನಮಾರ್ಗವನ್ನೇ ತೋರುವುದು. ಜ್ಞಾನದ ಮೇಲೆ ಶ್ರದ್ಧೆ ಇಲ್ಲದವನಿಗೆ, ಅವನಿಗೆ ತಕ್ಕಹಾಗೆ ಅಜ್ಞಾನವನ್ನೇ ಬೋಧಿಸಿ, ಜ್ಞಾನವನ್ನು ಸ್ವಲ್ಪವಾದರೂ ಅರ್ಥವಾಗದಂತೆ ಮಾಡಿ, ಅವನನ್ನು ಅಜ್ಞಾನ ಮಾರ್ಗದಲ್ಲಿಯೇ ಕಳುಹಿಸಬಲ್ಲದು. ಶರೀರದಲ್ಲಿನ ಆತ್ಮ ಮನುಷ್ಯನ ವಿಧಾನವನ್ನು ಅನುಸರಿಸಿ, ಅವನ ಮನೋಭಾವನೆಯನ್ನು ಅನುಸರಿಸಿ ವರ್ತಿಸಬಲ್ಲದು. ಮನುಷ್ಯನಿಗೆ ಜ್ಞಾನವನ್ನು ಬೋಧಿಸಿ ಜ್ಞಾನಮಾರ್ಗದಲ್ಲಾದರೂ ಕಳುಹಿಸಬಲ್ಲದು. ಇಲ್ಲದೇ ಹೋದರೆ ಮನುಷ್ಯನಿಗೆ ಅಜ್ಞಾನವನ್ನು ಬೋಧಿಸಿ ಅಜ್ಞಾನಮಾರ್ಗದಲ್ಲಾದರೂ ಕಳುಹಿಸಬಲ್ಲದು. ಆತ್ಮ ಹೇಗೆ ಅಂದುಕೊಂಡರೇ ಹಾಗೆ ಮಾಡಬಲ್ಲದು. ಜ್ಞಾನ ಅಜ್ಞಾನ ಮನುಷ್ಯನೊಂದರ ಶ್ರದ್ಧೆ ಅಶ್ರದ್ಧೆಗಳ ಮೇಲೆ ಆಧಾರಪಟ್ಟಿರುತ್ತದೆ. ಕರ್ಮಗಳನ್ನು ಅನುಸರಿಸಿ ಕಷ್ಟಸುಖಗಳನ್ನು ಕೊಡುವ ಆತ್ಮ, ಶ್ರದ್ಧೆಗಳನ್ನು ಅನುಸರಿಸಿ ಜ್ಞಾನ ಅಜ್ಞಾನಗಳನ್ನು ಕೊಡುವನು. ಆದ್ದರಿಂದ ಕೆಲವರಿಗೆ ಶರೀರದಲ್ಲಿ ಒಳ್ಳೆಯದಾಗಿರುವ ಆತ್ಮ, ಕೆಲವರಿಗೆ ಕೆಟ್ಟದಾಗಿರುತ್ತದೆ. ಕೆಲವರ ಪುಣ್ಯವನ್ನು ಅನುಸರಿಸಿ ಸುಖಗಳನ್ನು ಕೊಡುವ ಆತ್ಮ, ಕೆಲವರ ಪಾಪಗಳನ್ನು ಅನುಸರಿಸಿ ನರಕವನ್ನು ತೋರಿಸುವುದು.

ಆತ್ಮ ಶರೀರದಲ್ಲಿ ಇದ್ದು ಮನುಷ್ಯನ ಕರ್ಮಗಳನ್ನು ಅನುಸರಿಸಿ ಪ್ರಪಂಚ ಸುಖದುಃಖಗಳನ್ನು, ಶ್ರದ್ಧೆಗಳನ್ನು ಅನುಸರಿಸಿ ಜ್ಞಾನ ಅಜ್ಞಾನಗಳನ್ನು ತಿಳಿಸುವುದೆಂದು ತಿಳಿದುಕೊಂಡಿದ್ದೇವೆ. ಮನುಷ್ಯನಲ್ಲಿ ಅಶ್ರದ್ಧೆ, ಅಜ್ಞಾನದಿಂದ ಅಹಂ ಹೆಚ್ಚಾಗಿ ಇರುವುದರಿಂದ ಜ್ಞಾನಕ್ಕಿಂತಲೂ ಅಜ್ಞಾನವನ್ನೇ ಹೆಚ್ಚಾಗಿ ಕೊಡಬೇಕಾದ ಅವಶ್ಯಕತೆ ಏರ್ಪಡುತ್ತಿದೆ. ಅಷ್ಟೇ ಹೊರತು ಲೋಕದಲ್ಲಿನ ಮನುಷ್ಯರನ್ನು ಜ್ಞಾನಿಗಳಾಗಿ ಬದಲಾಯಿಸುವ ನಿಮಿತ್ತ ಜ್ಞಾನವನ್ನು ಬೋಧಿಸುವುದಿಲ್ಲ. ಆದ್ದರಿಂದ ಭೂಮಿಮೇಲೆ ಅಜ್ಞಾನವೇ ಬೆಳೆಯುತ್ತಾ ಬಂದಿದೆ. ಆ ವಿಧವಾಗಿ ಆತ್ಮವೇ ಅಜ್ಞಾನವನ್ನು ಬೋಧಿಸಿದೆ. ಆತ್ಮ ತನ್ನ ಇಷ್ಟ ಪ್ರಕಾರ ಏನೂ ಮಾಡದೆ ತಾನು ಮಾಡುವ ಕೆಲಸಗಳಿಗೆ ಕಾರಣವಿದ್ದರೇನೇ ಮಾಡುವುದು ಇಲ್ಲದಿದ್ದರೇ ಮಾಡುವುದಿಲ್ಲ. ಆದ್ದರಿಂದ ಮನುಷ್ಯನ ಕರ್ಮವನ್ನು ಅನುಸರಿಸಿ

ಪ್ರಪಂಚ ವಿಷಯಗಳನ್ನು ನಿರ್ಣಯಿಸಿ ಮಾಡುವುದು. ಹಾಗೆಯೇ ಅವನ ಆಸಕ್ತಿಯನ್ನು ಅನುಸರಿಸಿ ದೈವಸಂಬಂಧ ಜ್ಞಾನವನ್ನು ತಿಳಿಸುವುದು. ಹಾಗಲ್ಲದೇ ಯಾವುದೂ ಸ್ವಂತ ನಿರ್ಣಯ ತೆಗೆದುಕೊಳ್ಳುವುದಿಲ್ಲ. ಶರೀರಕ್ಕೆ ಆತ್ಮವೇ ಅಧಿಪತಿಯಾದರೂ ತನ್ನ ಆಧಿಪತ್ಯವನ್ನು, ಅಧಿಕಾರವನ್ನು ಮನುಷ್ಯನ ಕರ್ಮಗಳನ್ನು ಅನುಸರಿಸಿ ಪ್ರಪಂಚ ಸಂಬಂಧವಾಗಿ ಶ್ರದ್ಧೆಗಳನ್ನು ಅನುಸರಿಸಿ ದೈವ ಸಂಬಂಧವಾಗಿ ನಡೆಸುವುದು. ಮನುಷ್ಯನಲ್ಲಿ ದೈವದ ಮೇಲೆ ಶ್ರದ್ಧೆ ಇಲ್ಲದೆ ಇರುವುದರಿಂದ ಪ್ರಪಂಚದಲ್ಲಿ ಅಜ್ಞಾನ ಬೆಳೆಯುತ್ತಾ ಬಂದಿದೆ. ಮನುಷ್ಯನನ್ನು ಆತ್ಮವೇ ಅಜ್ಞಾನದಕಡೆ ಕಳುಹಿಸಿದೆ.

ಭೂಮಿಮೇಲೆ ಅಜ್ಞಾನವು ಬೆಳೆದುಹೋಗಿ ಧರ್ಮಗಳು ತಿಳಿಯದೇ ಹೋಗಿ, ಅಧರ್ಮಗಳು ಹೆಚ್ಚಾಗಿ ಹೋದಾಗ, ದೇವರು ಮನುಷ್ಯನ ರೂಪದಲ್ಲಿರುವ ಭಗವಂತನಾಗಿ ಬಂದು ಧರ್ಮಗಳನ್ನು ಬೋಧಿಸಿ ಸ್ವಲ್ಪಮಟ್ಟಿಗೆ ಅಧರ್ಮದವರನ್ನು ಧರ್ಮಗಳಿರುವವರಾಗಿ ಬದಲಾಯಿಸುವುದು. ಅದೆಲ್ಲವೂ ಹೊರಗಿನ ಪ್ರಪಂಚ ವಿಧಾನದಲ್ಲಿ ಭಗವಂತನು ಮಾಡುವ ಕೆಲಸವಾಗಿ ಇರುವಾಗ, ಶರೀರದೊಳಗೆ ಮಾತ್ರ ಮನುಷ್ಯನ ಶ್ರದ್ಧೆ, ಅಶ್ರದ್ಧೆಗಳನ್ನು ಅನುಸರಿಸಿ ಜ್ಞಾನವನ್ನು ಅಜ್ಞಾನವನ್ನು ಎರಡನ್ನೂ ಆತ್ಮ ಬೋಧಿಸುತ್ತಿದೆ. ಇದರ ಪ್ರಕಾರ ಅಂತರಂಗದಲ್ಲಿನ ವಿಶ್ವ ವಿದ್ಯಾಲಯಗಳಲ್ಲಿ ಜ್ಞಾನವನ್ನು ಬೋಧಿಸಿದಹಾಗೆಯೇ, ಅಜ್ಞಾನವು ಕೂಡಾ ಬೋಧಿಸಲ್ಪಡುವುದು. ಬಾಹ್ಯ ವಿದ್ಯಾಲಯದಲ್ಲಿ ಕೇವಲ ಧರ್ಮಗಳನ್ನು ಮಾತ್ರ ಬೋಧಿಸುತ್ತಾರೆ. ಅಂತರಂಗದಲ್ಲಿ ಬೋಧಕನು ಆತ್ಮವಾಗಿರುವಾಗ, ಹೊರಗಿನ ಬೋಧಕನು ಶರೀರದೊಂದಿಗೆ ಬಂದಿರುವ ಭಗವಂತನೆಂದು ಹೇಳಬಹುದು. ಒಳಗಿನ ವಿಶ್ವವಿದ್ಯಾಲಯವನ್ನಾಗಲೀ, ಹೊರಗಿನ ಭಗವಂತನು ಹೇಳುವ ವಿಧಾನವನ್ನಾಗಲೀ ತಿಳಿಯದವನು ದೇವರ ವಿಧಾನವನ್ನು ಸ್ವಲ್ಪವಾದರೂ ತಿಳಿಯದವನಾಗಿರುತ್ತಾನೆ. ಆದ್ದರಿಂದ ಎರಡು ವಿಧಾನಗಳನ್ನು ತಿಳಿಯಬೇಕು.

ಶರೀರದಲ್ಲಿನ ಆತ್ಮ, ಜ್ಞಾನವನ್ನು ಅಜ್ಞಾನವನ್ನು ಎರಡನ್ನೂ ಬೋಧಿಸಿದರೇ ಕೊನೆಗೆ ಅಜ್ಞಾನವೇ ಹೆಚ್ಚಾಗಿಹೋಗಿ ಅಧರ್ಮಗಳಿಗೆ ಸ್ಥಾನ

ಏರ್ಪಟ್ಟಿದೆ. ಒಳಗಿನ ಆತ್ಮ ಕರ್ಮವನ್ನು, ಶ್ರದ್ಧೆಯನ್ನು ಅನುಸರಿಸಿ ನಡೆಯಬೇಕಾಗಿರುವುದರಿಂದ, ಆತ್ಮ ತನ್ನ ಪಾತ್ರವನ್ನು ಸಕ್ರಮವಾಗಿ ಪೋಷಿಸಿದರೂ, ಸ್ವಲ್ಪ ಕಾಲಕ್ಕೆ ಧರ್ಮಗಳ ಸ್ಥಾನದಲ್ಲಿ ಅಧರ್ಮಗಳು ನಿಲ್ಲುತ್ತಿವೆ. ಹಾಗೆ ಬದಲಾವಣೆ ಹೊಂದಿರುವುದನ್ನು ಇಲ್ಲದಂತೇ ಮಾಡಿ ಪುನಃ ಧರ್ಮಗಳನ್ನು ನೆಲೆಗೊಳಿಸುವುದಕ್ಕೆ ಆತ್ಮ ಅಲ್ಲದೇ ಪರಮಾತ್ಮ ಅವಶ್ಯವಿದೆ. ಆದರೇ ಪರಮಾತ್ಮ ಏನೂ ಮಾಡುವವನಲ್ಲ. ಸುಮ್ಮನಿರುವವನು ಮಾತ್ರವೇ. ಆದ್ದರಿಂದ ಪರಮಾತ್ಮ ಒಂದು ಉಪಾಯದಿಂದ ಪುನಃ ಧರ್ಮಪ್ರತಿಷ್ಟಾಪನೆ ಮಾಡಲು ಸಜ್ಜಾಗಿದ್ದಾನೆ. ದೇವರು ದೇವರಾಗಿ ಅಲ್ಲದೇ ಮಾರು ವೇಷದಲ್ಲಿ, ಇನ್ನೊಂದು ಹೆಸರಿನೊಂದಿಗೆ ಏನಾದರೂ ಮಾಡಬಹುದು. ಹಾಗೆ ಮಾಡುವುದರಿಂದ ಆ ಕೆಲಸವನ್ನು ದೇವರು ಮಾಡಿದಂತೆ ಲೆಕ್ಕಿಸಲ್ಪಡುವುದಿಲ್ಲ. ಆದಕಾರಣ ಅಧರ್ಮಗಳು ಹೆಚ್ಚಾದಾಗ ದೇವರು ಭಗವಂತನ ವೇಷದಲ್ಲಿ ಯಾವುದೋ ಒಂದು ಹೆಸರಿನಿಂದ ಭೂಮಿಮೇಲಕ್ಕೆ ಬಂದು ತನ್ನ ಧರ್ಮಗಳನ್ನು ಪುನಃ ಪ್ರತಿಷ್ಠಿಸಿ ಹೋಗುತ್ತಾನೆ. ದೇವರು ಭಗವಂತನಾಗಿ ಬರುವುದು ಅಪರೂಪವಾಗಿ ಇರುತ್ತದೆ. ಎಂದರೇ ಧರ್ಮಗಳು ಅಧರ್ಮಗಳಾಗಿ ಬದಲಾಗುವುದು ಅಪರೂಪವಾಗಿ ನಡೆಯುವುದು. ಇದನ್ನನುಸರಿಸಿ ಒಂದು ಸಲ ದೇವರು ಭಗವಂತನಾಗಿ ಬಂದು ಧರ್ಮ ಪ್ರತಿಷ್ಠಾಪನೆ ಮಾಡಿದರೇ ಅದು ಬಹಳ ಕಾಲದವರೆಗು ಹಾಗೆಯೇ ಇರುತ್ತದೆ. ಬಹಳಕಾಲ ಕಳೆದಾಗ ಶರೀರದಲ್ಲಿ ಆತ್ಮ ಅವಶ್ಯವನ್ನು ಅನುಸರಿಸಿ ಧರ್ಮಗಳನ್ನು, ಹಾಗೆಯೇ ಅವಶ್ಯವನ್ನು ಅನುಸರಿಸಿ ಅಧರ್ಮಗಳನ್ನು ಬೋಧಿಸುವುದರಿಂದ ಸ್ವಲ್ಪಸ್ವಲ್ಪವಾಗಿ ಅಧರ್ಮಗಳು ಅಭಿವೃದ್ಧಿ ಹೊಂದುತ್ತಾ ಬಂದು ಕೊನೆಗೆ ತಾರಾಸ್ಥಾಯಿಗೆ ಸೇರುವುದು. ಆಗ ಪುನಃ ಭಗವಂತನು ಬರಬೇಕಾಗಿರುತ್ತದೆ.

**ಪ್ರಶ್ನೆ :– ಮನುಷ್ಯರಲ್ಲಿ ಅಜ್ಞಾನವು ಸಹ ಆತ್ಮದಿಂದಲೇ ಅಭಿವೃದ್ಧಿ ಆಗುತ್ತಿದೆಯೆಂದು ತಿಳಿಯುತ್ತಿದೆ. ಮನುಷ್ಯರು ಸ್ವತಃವಾಗಿ ಜ್ಞಾನವನ್ನು ಕಲಿಯಲಾರರು, ಹಾಗೆಯೇ ಅಜ್ಞಾನವನ್ನು ಕಲಿಯಲಾರರು ಎಂದು ತಿಳಿಯುತ್ತಿದೆ. ಆತ್ಮಕ್ಕೆ ಜ್ಞಾನ ಅಜ್ಞಾನ ಎರಡೂ ತಿಳಿದಾಗ ಶ್ರದ್ಧೆ ಇಲ್ಲದವರಿಗು ಸಹ ಜ್ಞಾನವನ್ನೇ ಬೋಧಿಸಿದ್ದರೇ, ದೇವರು**

**ಭೂಮಿಮೇಲಕ್ಕೆ ಭಗವಂತನಾಗಿ ಬರಬೇಕಾದ ಕೆಲಸವೇ ಇಲ್ಲ! ಆತ್ಮ ಆ ಕೆಲಸವನ್ನು ಮಾಡಿದ್ದರೇ ದೇವರು ಭೂಮಿಮೇಲೆ ಹುಟ್ಟಬೇಕಾದ ಕೆಲಸವೇ ಇಲ್ಲ!**

**ಉತ್ತರ :–** ಆತ್ಮ ಪ್ರಣಾಳಿಕಾ ಬದ್ಧವಾಗಿ ಶರೀರದಲ್ಲಿ ಇರುವುದರಿಂದ ಆತ್ಮ ಕರ್ಮ ನಿಯಮಗಳನ್ನು, ಶ್ರದ್ಧೆ ಅಳತೆಗಳನ್ನು ಅನುಸರಿಸಿ ನಡೆಯಬೇಕಾಗಿರುತ್ತದೆ. ಆದ್ದರಿಂದ ಆತ್ಮ ತನ್ನ ನಿಯಮಗಳನ್ನು ಪಾಟಿಸುತ್ತಾ ನಡೆಯಬೇಕಾಗಿರುತ್ತದೆ. ಮನುಷ್ಯನೊಂದರ ಕರ್ಮ ನಿಯಮಗಳನ್ನು ಅನುಸರಿಸುವುದರಿಂದ ಭೂಮಿಮೇಲೆ ಎಂದರೇ ಹೊರಗಿನ ಪ್ರಪಂಚದಲ್ಲಿ ಅನ್ಯಾಯಗಳನ್ನು, ಅಕ್ರಮಗಳನ್ನು ಆತ್ಮವೇ ಮನುಷ್ಯರ ಮೂಲಕ ಮಾಡಬೇಕಾಗಿ ಬಂದಿದೆ. ಕೆಟ್ಟ ಕೆಲಸವಾದ ಒಂದು ಕಳ್ಳತನ ನಡೆದಾಗ, ಆ ಕಳ್ಳತನದಲ್ಲಿ ಮದುವೆಗಾಗಿ ಎತ್ತಿಟ್ಟುಕೊಂಡ ವರದಕ್ಷಿಣೆ ಹಣ ಹೋಗಿ, ಮದುವೆ ನಿಂತುಹೋಗಿ, ಮದುವೆಹೆಣ್ಣು ಅವಮಾನದಿಂದ ಆತ್ಮಹತ್ಯೆ ಮಾಡಿಕೊಂಡು ಸತ್ತುಹೋದಳು. ಸತ್ತುಹೋಗಿರುವ ಮದುಮಗಳನ್ನು ನೋಡಿ ಪ್ರತಿಯೋಬ್ಬರೂ ಕಣ್ಣೀರಿಟ್ಟರು. ಮನುಷ್ಯರು ಯಾವ ಕೆಲಸವನ್ನೂ ಸ್ವತಃವಾಗಿ ಮಾಡಲಾರರು. ಮನುಷ್ಯನಲ್ಲಿರುವ ಆತ್ಮ ಮನುಷ್ಯನನ್ನು ಗೊಂಬೆಯಹಾಗೆ ಕದಿಲಿಸಿ ಮನುಷ್ಯನ ಮೂಲಕ ಕೆಲಸ ಮಾಡಿಸುತ್ತಿದೆ. ಚೆನ್ನಾಗಿ ಆಲೋಚಿಸಿದರೇ ಈ ಕಳ್ಳತನ ಕೆಲಸವನ್ನು ಎಲ್ಲವನ್ನೂ ಆತ್ಮವೇ ಮನುಷ್ಯನ ಮೂಲಕ ಮಾಡಿದೆ. ಮದುವೆ ನಿಂತುಹೋಗಿ ಮದುಮಗಳು ಸಾಯುವುದು ದುಖಃಕರವಾದ ವಿಷಯವೇ ಆದರೂ, ಅಂತಹ ದುಖಃಕರವಾದ ಕಾರ್ಯವನ್ನು ಎಲ್ಲಾ ಆತ್ಮವೇ ಮಾಡಿದೆ. ಆತ್ಮಕ್ಕೆ ಸಹ ಇದು ದುಖಃಕರವಾದ ವಿಷಯವೆಂದು ತಿಳಿದಿದೆ. ಅವರು ಗತ ಜನ್ಮದಲ್ಲಿ ಮಾಡಿಕೊಂಡಿರುವ ಪಾಪಕ್ಕೆ ಪರಿಹಾರವಾಗಿ ಬಾಧೆಯನ್ನು ಅನುಭವಿಸಬೇಕಾಗಿದೆ. ಅವರ ಪಾಪವನ್ನು ಅನುಭವಿಸುವಂತೆ ಮಾಡುವುದಕ್ಕೆ ಅದನ್ನು ಕಾರ್ಯ ರೂಪವಾಗಿ ಮಾಡಬೇಕಾಗಿರುವ ಅವಶ್ಯವಿದೆ. ಕಾರ್ಯವನ್ನು ಮಾಡುವುದು ಆತ್ಮವೇ ಆಗಿರುವುದರಿಂದ, ಕಳ್ಳರಲ್ಲಿದ್ದು ಕಳ್ಳತನ ಮಾಡಿರುವುದು ಆತ್ಮವೇ. ಹಾಗೆಯೇ ಮದುಮಗಳನ್ನು ಹಿಂಸೆಗೆ ಗುರಿಮಾಡಿ ಕೊನೆಗೆ ಸಾಯಿಸಿರುವುದು ಸಹ ಆತ್ಮವೇ. ಎಲ್ಲರ ಶರೀರದಲ್ಲಿರುವ ಆತ್ಮ ಪಾಪವನ್ನು ಕಾರ್ಯರೂಪವಾಗಿ ಮಾಡಿ ಅನುಭವಿಸುವಂತೆ ಮಾಡಿದೆ.

ಪ್ರತಿ ಕೆಲಸದ ಹಿಂದೆ ಆತ್ಮ ಪಾತ್ರವಿದೆ ಎಂದು ಮನುಷ್ಯರಿಗೆ ತಿಳಿಯದೇ ಹೋಗಿದೆ. ಒಂದು ಕೆಲಸಕ್ಕೆ ಬೇಕಾಗಿರುವ ಸಂಕಲ್ಪದಿಂದ ಕೆಲಸವೆಲ್ಲವೂ ಜೀವಿಯೇ ಮಾಡಿದಂತೆ ಜೀವಿಗೆ ತಿಳಿದು ನಡೆಯುತ್ತಿರುವುದರಿಂದ, ಪ್ರತಿ ಜೀವಿಯು ಆ ಕೆಲಸವನ್ನು ತಾನೇ ಮಾಡಿದ್ದೇನೆಂದು ಭ್ರಮಿಸುತ್ತಿದ್ದಾನೆ. ಆತ್ಮ ಕೆಲಸವನ್ನು ಮಾಡಿದರೂ ತಾನು ಮಾಡಿದಂತೆ ಆತ್ಮ ಎಲ್ಲೂ ಹೊರಬೀಳಲಿಲ್ಲ. ಆತ್ಮ ಪ್ರತಿ ಶರೀರದಲ್ಲಿಯು ಅಡಗಿದ್ದು ಹೊರಗೆ ತಿಳಿಯದೆ ಎಲ್ಲಾ ಕೆಲಸಗಳಿಗೆ ಕಾರಣವಾಗುತ್ತಿದೆ. ಹೀಗೆ ಪ್ರಣಾಳಿಕಾಬದ್ಧವಾಗಿ ಶರೀರದಲ್ಲಿ ಒಂದು ಪಾಪಕರ್ಮ ವನ್ನು ಅನುಸರಿಸಿ ನಡೆಯುವುದು ಈಗ ನೋಡಿದ್ದೇವೆ ಅಲ್ಲವೇ! ಇಲ್ಲಿ ನಡೆದ ಕಾರ್ಯವು ಕಳ್ಳತನ, ಮಾಡಿರುವುದು ಒಬ್ಬ ಕಳ್ಳನೆಂದು ಎಲ್ಲರಿಗೂ ತಿಳಿದಿದೆ. ಆದರೇ ಆ ಕಳ್ಳ ಯಾರು? ಎನ್ನುವ ಕಡೆ ಎಲ್ಲರು ಭ್ರಮಿಸಿ ಮೇಲ್ನೋಟಕ್ಕೆ ಕಾಣಿಸುವವನನ್ನೇ ಕಳ್ಳನೆಂದು ಹೇಳುತ್ತಿದ್ದೇವೆ. ವಾಸ್ತವವಾಗಿ ನಾನೇ ಕಳ್ಳನೆಂದು ಆ ಮನುಷ್ಯ ಸಹ ಅಂದುಕೊಳ್ಳುವುದು ನಡೆಯುತ್ತಿದೆ. ಆದರೇ ಹೊರಗೆ ಕಾಣಿಸದೇ ಶರೀರದೊಳಗೆ ಇರುವ ಆತ್ಮವೇ ನಿಜವಾಗಿ ಕಳ್ಳತನ ಎಂಬ ಕಾರ್ಯವನ್ನು ಮಾಡಿದವನು ಎಂದು ಯಾರೂ ಗ್ರಹಿಸಲಾರದೇ ಹೋಗಿದ್ದಾರೆ. ಪ್ರಣಾಳಿಕಾ ಬದ್ಧನಾದ ಆತ್ಮ ಪಾಪಕರ್ಮವನ್ನು ಅನುಸರಿಸಿ ಕೆಟ್ಟದಾಗಿ ಪ್ರವರ್ತಿಸಿ ಕೆಲಸ ಮಾಡಬೇಕಾಗಿಬಂದಿದೆ. ಅಂತಹ ಪಾಪದಿಂದಾಗಲೀ, ಪುಣ್ಯದಿಂದಾಗಲೀ ಆತ್ಮ ತಪ್ಪಿಸಿಕೊಳ್ಳುವುದಕ್ಕೆ ಅವಕಾಶವಿಲ್ಲ. ಮನುಷ್ಯನ ಕರ್ಮಗಳನ್ನು ಅನುಸರಿಸಿ ಆತ್ಮ ಶರೀರದಲ್ಲಿ ಕೆಲಸ ಮಾಡಬೇಕಾಗಿದೆ. ಈ ವಿಧವಾಗಿಯೇ ಒಳ್ಳೆಯ ಕರ್ಮಗಳಾದ ಪುಣ್ಯಗಳ ಬಗ್ಗೆ, ಕೆಟ್ಟ ಕರ್ಮಗಳಾದ ಪಾಪಗಳ ಬಗ್ಗೆ ನಿಯಮಬದ್ಧನಾಗಿ ಆತ್ಮ ಕೆಲಸ ಮಾಡಬೇಕಾಗಿದೆ.

ಕರ್ಮಗಳ ಬಗ್ಗೆ ಹೇಗೆ ಆತ್ಮ ಕೆಲಸಮಾಡುತ್ತಿದೆಯೋ, ಮನುಷ್ಯ ನೊಂದರ ಶ್ರದ್ಧೆಯನ್ನು ಅನುಸರಿಸಿ ಜ್ಞಾನ ವಿಷಯಗಳಲ್ಲಿಯೂ, ಅಶ್ರದ್ಧೆಯನ್ನು ಅನುಸರಿಸಿ ಅಜ್ಞಾನ ವಿಷಯಗಳಲ್ಲಿಯೂ ಆತ್ಮ ನಿಯಮ ಬದ್ಧವಾಗಿ ಕೆಲಸ ಮಾಡುತ್ತಿದೆ. ಜ್ಞಾನ ವಿಷಯಗಳಲ್ಲಿ ಹೇಗೆ ನಿಯಮಬದ್ಧವಾಗಿ ಆತ್ಮ ಕೆಲಸ

ಮಾಡುತ್ತಿದೆಯೋ, ಕೆಲವು ವಿಷಯಗಳನ್ನು ಉಪಮಾನವಾಗಿ ತೆಗೆದುಕೊಂಡು ನೋಡಿದಂತಾದರೇ ಆತ್ಮವೊಂದರ ವಿಧಾನವು ಪೂರ್ತಿಯಾಗಿ ತಿಳಿಯುವುದು. ಒಬ್ಬವ್ಯಕ್ತಿ ದೇವರ ವಿಧಾನದಲ್ಲಿ ಭಕ್ತಿಯಿರುವವನೆಂದು ಹೇಳಿಕೊಳ್ಳುತ್ತಿದ್ದನು. ದೈವಗ್ರಂಥಗಳು ಓದುತ್ತಿದ್ದನು. ಆದರೇ ಪ್ರಪಂಚ ವಿಷಯಗಳೊಂದಿಗೆ ಹೋಲಿಸಿ ನೋಡಿದರೇ ಪ್ರಪಂಚ ವಿಷಯಗಳ ಮೇಲಿರುವಷ್ಟು ಶ್ರದ್ಧೆ ದೈವವಿಷಯಗಳ ಮೇಲೆ ಇಲ್ಲವೆಂದು ತಿಳಿಯಿತು. ಆ ಮನುಷ್ಯ ತನಗಿರುವ ಶ್ರದ್ಧೆ ಕಡಿಮೆ ಎಂದು ಅಂದುಕೊಳ್ಳದೇ ತನ್ನದೇ ದೊಡ್ಡ ಶ್ರದ್ಧೆಯೆಂದು, ತಾನೇ ಸಕ್ರಮ ಮಾರ್ಗದಲ್ಲಿ ಇದ್ದೇನೆಂದು ಅಂದುಕೊಳ್ಳುತ್ತಿದ್ದನು. ದೈವಗ್ರಂಥಗಳಲ್ಲಿನ ವಾಕ್ಯಗಳಿಗೆ ತನಗೆ ಅರ್ಥವಾಗಿರುವುದೇ ಸರಿಯಾದ ಅರ್ಥವೆಂದು ಅಂದುಕೊಳ್ಳುತ್ತಿದ್ದನು. ತನಗಿಂತಲೂ ದೊಡ್ಡ ಜ್ಞಾನಿಗಳನ್ನಾದರೂ ಲೆಕ್ಕಿಸದೆ ಅವರಿಗಿಂತಲೂ ತಾನೇ ಹೆಚ್ಚು ತಿಳಿದವನೆಂದು ಅಂದುಕೊಳ್ಳುತ್ತಿದ್ದನು. ಒಂದುದಿನ ದೈವಜ್ಞಾನಕ್ಕೆ ಸಂಬಂಧಿಸಿದ ಒಂದು ಗ್ರಂಥವನ್ನು ಓದಿ ಅದರಲ್ಲಿನ ವಾಕ್ಯಗಳನ್ನು ಅರ್ಥ ಮಾಡಿಕೊಳ್ಳಬೇಕೆಂದು ಪ್ರಯತ್ನಿಸಿದನು. ಅಲ್ಲಿ ಆತನಿಗೆ ಅರ್ಥವಾಗಿರುವುದು ಅರ್ಥವಾಗಿರುವಾಗ ಅದೇ ನಿಜವಾದ ಅರ್ಥವೆಂದು ಅಂದುಕೊಂಡನು. ಕೆಲವು ದಿನಗಳಿಗೆ ಮತ್ತೊಬ್ಬ ಜ್ಞಾನಿ ಆತನಬಳಿಗೆ ಬಂದಾಗ ಆತನಿಗೆ ಸಹ ಆ ವಾಕ್ಯವನ್ನು ಹೇಳಿ ವಿವರವನ್ನು ಹೇಳಿದನು. ಆಗ ಆ ಮತ್ತೊಬ್ಬ ಜ್ಞಾನಿ ಆ ವಾಕ್ಯವೊಂದರ ಅರ್ಥದ ಮೇಲೆ ಸ್ವಲ್ಪ ಅನುಮಾನವನ್ನು ವ್ಯಕ್ತಪಡಿಸಿದನು. ಆದರೇ ಜಪಾತಾ ಎನ್ನುವಾತ ತನ್ನದೇ ಸರಿಯಾದ ಅರ್ಥವೆಂದು ಹೇಳಿದಾಗ, ಬಂದಿರುವ ಜ್ಞಾನಿ ಸಹ ಅದೇ ನಿಜವಾಗಿರಬಹುದೆಂದು ಜಪಾತ ಅರ್ಥವನ್ನೇ ಸರಿಯಾದುದೆಂದುಕೊಂಡನು. ಮೊದಲು ಜಪಾತ ಎನ್ನುವವನು ಗ್ರಂಥದಿಂದ ಅರ್ಥಮಾಡಿಕೊಂಡ ಜ್ಞಾನ ವಿಷಯವನ್ನು ಇತರ ಜ್ಞಾನಿಗಳಿಗೆ ಸಹ ಹೇಳುವುದರಿಂದ ಅದೇ ಸರಿಯಾದ ಜ್ಞಾನವೆಂದು ನಂಬಿದವರೆಲ್ಲರೂ ಆತನು ಹೇಳಿದಹಾಗೆಯೇ ನಡೆದುಕೊಳ್ಳುತ್ತಿದ್ದರು.

ವಾಸ್ತವವಾಗಿ ಗ್ರಂಥದಲ್ಲಿ ಜೇನ್ನೊಣ ಎಂದು ಬರೆಯಲಾಗಿರುವಾಗ ಜಪಾತ ಅದನ್ನು ನೊಣವಾಗಿ ಅರ್ಥ ಮಾಡಿಕೊಂಡಿದ್ದಾನೆ. ಜೇನ್ನೊಣ ಎಂದರೇ ದೊಡ್ಡ ನೊಣ ಎಂದು ಅರ್ಥಮಾಡಿಕೊಂಡಿರುವುದರಿಂದ ನೊಣದ ಜಾತಿಯಲ್ಲಿಯೇ ದೊಡ್ಡದಾಗಿರುವ ನೊಣವನ್ನು ಜೇನ್ನೊಣ ಎಂದು ಅನ್ನುತ್ತಾರೆಂದುಕೊಂಡನು. ಜೇನ್ನೊಣ ಎಂದರೇ ಅದರ ಜಾತಿಯೇ ಬೇರೆಯೆಂದು, ಸಾಧಾರಣ ನೊಣದಂಥದ್ದು ಅಲ್ಲವೆಂದು ಜಪಾತಗೆ ತಿಳಿಯಲಿಲ್ಲ. ಜೇನ್ನೊಣದ ಬಾಲ ಉದ್ದವಾಗಿ ಇದ್ದರೆ, ರೆಕ್ಕೆಗಳು ಉದ್ದವಾಗಿ ಇದ್ದರೆ, ಉದ್ದ ರೆಕ್ಕೆಗಳಿಲ್ಲದ, ಉದ್ದ ಬಾಲ ಇಲ್ಲದಿರುವುದಾದ ನೊಣವಾಗಿ ಹೋಲಿಸಿಕೊಂಡನು. ಅದು ತಪ್ಪೆಂದು ಅಂದುಕೊಳ್ಳದೇ ಎಲ್ಲರಿಗೂ ಅದನ್ನೇ ಹೇಳಿದನು. ಒಂದು ದಿನ ಬೇರೆ ಊರಿನಿಂದ ದೊಡ್ಡ ಜ್ಞಾನಿ ಬಂದು ಜಪಾತ ಹೇಳುವ ನೊಣವನ್ನು ಕೇಳಿ ಅದು ಜೇನ್ನೊಣವಲ್ಲ ಎಂದು ಹೇಳಿದನು. ಜೇನ್ನೊಣ ನೊಣದ ಜಾತಿಯಲ್ಲ ಎಂದು ಪಕ್ಷಿ ಜಾತಿಯೆಂದು ಹೇಳಿದಾಗ ಜಪಾತ ಮತ್ತು ಆತನ ಅನುಚರರು (ಶಿಷ್ಯರು) ಎಲ್ಲರೂ 'ಇಲ್ಲ ತಮ್ಮ ಗರು ಹೇಳಿರುವುದೇ ನಿಜವೆಂದು' ವಾದಿಸಿದ್ದಾರೆ. ಹೊಸದಾಗಿ ಬಂದು ಹೇಳಿರುವ ಅವನ ಮಾತನ್ನು ಕೇಳಲಿಲ್ಲ. ಹಾಗೆಯೇ ಮತ್ತೊಂದು ಕಡೆ 'ಹಾಸಿಗೆ ಪತ್ಯ' ಎಂದು ಬರೆದಿದ್ದರೇ ಅದನ್ನು ಹಗಲು ಪತ್ಯವೆಂದು ತಿಳಿದು ಹಗಲು ಅನ್ನವನ್ನು ತಿನ್ನದೇ ಇರುತ್ತಿದ್ದರು. ಅದನ್ನು ಸಹ ಹೊಸದಾಗಿ ಬಂದ ಜ್ಞಾನಿ ಹಾಸಿಗೆ ಪತ್ಯ ಎಂದು ಹೇಳಿದರೇ ಹೆಂಡತಿಗಂಡ ಸೇರದೇ ದೂರವಾಗಿ ಇರಬೇಕೆಂದು ಹೇಳಿದರೂ, ಜಪಾತ ಮತ್ತು ಆತನ ಶಿಷ್ಯರು ಹಗಲು ಪತ್ಯವೇ ಸರಿಯಾದ ಅರ್ಥವೆಂದು ವಾದಿಸಿದರು. ಜೇನ್ನೊಣವನ್ನು ನೊಣವಾಗಿ, ಹಾಸಿಗೆ ಪತ್ಯವನ್ನು ಹಗಲು ಪತ್ಯವಾಗಿ ಅಂದುಕೊಂಡು ಅದೇ ಸರಿಯಾದ ಅರ್ಥವೆಂದು ಜಪಾತ ಅಂದುಕೊಳ್ಳುವುದಕ್ಕೆ ಕಾರಣ ಆತನಿಗೆ ಪ್ರಪಂಚ ವಿಷಯಗಳ ಮೇಲಿರುವ ಶ್ರದ್ಧೆಗಿಂತಲೂ ಜ್ಞಾನದ ಮೇಲೆ ಶ್ರದ್ಧೆ ಕಡಿಮೆಯಾಗಿ ಇರುವುದೇ ಎಂದು ತಿಳಿಯುತ್ತಿದೆ.

ಶರೀರದಲ್ಲಿನ ಆತ್ಮ **"ಶ್ರದ್ಧಾವಾನ್ ಲಭತೇ ಜ್ಞಾನಂ"** ಎನ್ನುವಂತೆ ಅವನ ಶ್ರದ್ಧೆಯನ್ನು ಅನುಸರಿಸಿ ಅವನಿಗೆ ಜ್ಞಾನ ಅರ್ಥವಾಗುವಂತೆ ಮಾಡಿದೆ. ಪ್ರಪಂಚ

ಶ್ರದ್ಧೆ ಹೆಚ್ಚಾಗಿರುವುದರಿಂದ ಜ್ಞಾನ ಸಂಬಂಧ ವಿಷಯಗಳು ಕೂಡಾ ಪ್ರಪಂಚ ಸಂಬಂಧ ವಿಷಯಗಳಂತೆ ಕಾಣಿಸುತ್ತಿವೆ. ಜೇನ್ನೊಣ ನೊಣವಾಗಿ ಕಾಣಿಸಿದಂತೆ, ಹಾಸಿಗೆ ಪತ್ಯ ಹಗಲು ಪತ್ಯವಾಗಿ ಕಾಣಿಸಿದೆ. ಈ ವಿಧವಾಗಿಯೇ ಅಂತಿಮ ದೈವಗ್ರಂಥದಲ್ಲಿನ ಒಂದು ವಾಕ್ಯವನ್ನು ತಪ್ಪಾಗಿ ಅರ್ಥಮಾಡಿಕೊಂಡು ತಾನು ಆಚರಿಸುವುದೇ ಅಲ್ಲದೇ ತನ್ನ ಶಿಷ್ಯರೆಲ್ಲರನ್ನೂ ಆಚರಿಸುವಂತೆ ಮಾಡಿದನು. ಈ ವಿಧವಾಗಿ ತಪ್ಪಾಗಿ ಅರ್ಥಮಾಡಿಕೊಳ್ಳುವುದಕ್ಕೆ ಕಾರಣ ತನ್ನ ಶ್ರದ್ಧೆಯೆಂದು ಆತನಿಗೆ ಅರ್ಥವಾಗಲಿಲ್ಲ. ಶರೀರದಲ್ಲಿನ ಆತ್ಮ ಅವನ ಶ್ರದ್ಧೆಯನ್ನು ಅನುಸರಿಸಿ ಪದಗಳಿಗೆ, ವಾಕ್ಯಗಳಿಗೆ ತಪ್ಪು ಅರ್ಥಗಳನ್ನು ಊಹೆಗೆ ತಿಳಿಸುವುದರಿಂದ ಆತನು ತಪ್ಪು ಭಾವನೆಯೊಳಗೆ ಹೋಗುವುದು ನಡೆದಿದೆ. ಸ್ಥೂಲ ದೃಷ್ಠಿ ಹೊಂದಿರುವ ಒಬ್ಬ ವ್ಯಕ್ತಿಗೆ ಎಲ್ಲಾ ಸ್ಥೂಲವಾಗಿಯೇ ಅರ್ಥವಾಗುವಂತೆ ಆತ್ಮ ಮಾಡಬಲ್ಲದು. ಹಾಗೆಯೇ ಇರುವ ಭಾವನೆಗಿಂತಲೂ ಬೇರೆಯಾಗಿ ಸ್ವಲ್ಪ ಪಕ್ಕದ ಭಾಬನೆಯನ್ನು ತಿಳಿಸಬಲ್ಲದು. ಜೇನ್ನೊಣಕ್ಕೆ ನೊಣವಾಗಿ, ಹಾಸಿಗೆ ಪತ್ಯಕ್ಕೆ ಹಗಲು ಪತ್ಯವಾಗಿ ಸ್ವಲ್ಪ ಭೇದವನ್ನು ಹೇಗೆ ಕಲ್ಪಿಸಿದೆಯೋ ಹಾಗೆಯೇ ಎಲ್ಲಾ ವಿಷಯಗಳಲ್ಲಿ ಪಕ್ಕದದಾರಿಯಲ್ಲಿ ಕಳುಹಿಸುವುದು.

ದೈವಜ್ಞಾನಕ್ಕೆ ಸಂಬಂಧವಿಲ್ಲದ ವಿಷಯವು ಹಗಲು ಪತ್ಯ. ವಾಸ್ತವವಾಗಿ ದೇವರು ಹಗಲು ತಿನ್ನುವುದಕ್ಕೆ ಕೊಟ್ಟಿದರೇ, ರಾತ್ರಿ ಹೆಂಡತಿಯರೊಂದಿಗೆ ಕಳೆಯುವುದಕ್ಕೆ ಕೊಟ್ಟಿದ್ದಾನೆ. ಹಗಲು ತಿನ್ನುವ ವಸ್ತುಗಳನ್ನು ತಿಂದು ಅವುಗಳ ರುಚಿಯನ್ನು ಅನುಭವಿಸುವುದಕ್ಕೆ ನಿಯಮಿಸಿ, ಹಗಲು ಹಸಿವು ಉಂಟಾಗುವಂತೆ ಮಾಡಿದ್ದಾನೆ. ಅದೇ ರಾತ್ರಿ ಹೊತ್ತು ಹೆಂಡತಿಯರೊಂದಿಗೆ ರಮಿಸುವುದಕ್ಕೆ ಯಾವ ಕಾರ್ಯಗಳು ಇಲ್ಲದೇ ಬಿಡುವಿನ ವೇಳೆಯಾಗಿ ಇಟ್ಟಿದ್ದಾನೆ. ಆದರೇ ಆತ್ಮ, ಜ್ಞಾನದ ಮೇಲೆ ಶ್ರದ್ಧೆಯಿಲ್ಲದವನಿಗೆ ಈ ವಿಷಯವು ತಲೆಕೆಳಗಾಗಿ ಅರ್ಥವಾಗುವಂತೆ ಮಾಡಿ, ದೇವರಿಟ್ಟಿರುವ ನಿಯಮಕ್ಕೆ ವಿರುದ್ಧವಾಗಿ ನಡೆಯುವಂತೆ ಮಾಡುತ್ತಿದೆ. ನಾನು ದೇವರು ಇಟ್ಟಿರುವ ನಿಯಮಕ್ಕೆ ವಿರುದ್ಧವಾಗಿ ನಡೆಯುತ್ತಿದ್ದೇನೆ ಎಂಬ ನೆನಪು ಮನುಷ್ಯನಿಗೆ ಇಲ್ಲದಂತೆ ಮಾಡುತ್ತಿದೆ.

ಹಿಂದೂಗಳಾಗಿರುವವರು ಭಕ್ತಿ ಉಂಟಾಗಿ ಯಾವುದೋ ಒಂದು ದೇವತೆಗೆ ಮೀಸಲು ಸಲ್ಲಿಸುವುದಕ್ಕೆ ಉಪವಾಸವಿದ್ದು, ಎಂದರೇ ಹಗಲು ಅನ್ನ ತಿನ್ನದೇ ಇದ್ದು ಪೂಜೆಗಳು ಮಾಡುತ್ತಿದ್ದಾರೆ. ನವರಾತ್ರಿ ಸಮಯದಲ್ಲಿ ಹಗಲೆಲ್ಲಾ ಉಪವಾಸವಿದ್ದು ರಾತ್ರಿಯೆಲ್ಲಾ ತಿನ್ನುತ್ತಾ ತಿರುಗುತ್ತಾ, ನಿದ್ರೆಮಾಡದೆ ಜಾಗರಣೆ ಮಾಡುತ್ತಿದ್ದೇವೆಂದು ಹೇಳುತ್ತಿರುತ್ತಾರೆ. ಇಲ್ಲಿ ದೇವರ ನಿಯಮವನ್ನು ಅತಿಕ್ರಮಿಸಿದ್ದೇವೆಂದು ಸ್ವಲ್ಪವಾದರೂ ಸಹ ಯಾರೂ ಅಂದುಕೊಳ್ಳುತ್ತಿಲ್ಲ. ಮೇಲಾಗಿ ನಮ್ಮದು ಭಕ್ತಿಯೆಂದು ಕೆಲವರೂ, ಜ್ಞಾನವೆಂದು ಕೆಲವರೂ ಹೇಳಿಕೊಳ್ಳುತ್ತಿದ್ದಾರೆ. ಯಾರಾದರೂ ಆಹಾರ ತಿನ್ನದೇ ಹೋದರೇ ಆತ್ಮಕ್ಕೆ ತೊಂದರೆಯೆಂದು ಭಗವದ್ಗೀತೆಯಲ್ಲಿ ಶ್ರದ್ಧಾತ್ರಯ ಯೋಗದಲ್ಲಿ ಆರನೆಯ ಶ್ಲೋಕದಲ್ಲಿ ಹೇಳಿದ್ದಾರೆಂದು ಹೇಳಿದರೂ ಭಗವದ್ಗೀತೆ ಮಾತನ್ನು ಸಹ ಲೆಕ್ಕಿಸುವುದಿಲ್ಲ. ತಮಗೆ ಮನುಷ್ಯರು ಹೇಳಿರುವ ಮಾತುಗಳೇ ಮುಖ್ಯವೆನ್ನುವಂತೆ ಪ್ರವರ್ತಿಸುತ್ತಾ ದೈವಗ್ರಂಥಗಳಲ್ಲಿನ ಮಾತುಗಳನ್ನು ಲೆಕ್ಕಮಾಡದೆಹೋಗುವುದು ನಡೆಯುತ್ತಿದೆ ಎಂದರೇ, ಹಾಗೆ ಪ್ರವರ್ತಿಸುವಂತೆ ಅವನಲ್ಲಿ ಅವನಿಗೆ ತಿಳಿದಿರುವುದೇ ಮುಖ್ಯವೆಂದು ಆತ್ಮವೇ ತಿಳಿಸುವುದರಿಂದ ಅದು ತನ್ನ ನಿರ್ಣಯವಾಗಿಯೇ ತಿಳಿದು ತಪ್ಪು ಮಾಡುತ್ತಿದ್ದಾನೆ. ಶರೀರವು ವಿದ್ಯಾಲಯವಾಗಿ ಇರುವಾಗ, ಅದರಲ್ಲಿ ಬೋಧಿಸುವ ಬೋಧಕನು ಆತ್ಮ ಎಂದು ಯಾರಿಗೂ ತಿಳಿದಿಲ್ಲ. ಪ್ರಪಂಚದಲ್ಲಿ ಯಾರನ್ನು ಜ್ಞಾನಿಯಾಗಿ ತಯಾರು ಮಾಡಬೇಕೆಂದರೂ, ಯಾರನ್ನು ಅಜ್ಞಾನಿಯಾಗಿ ತಯಾರು ಮಾಡಬೇಕೆಂದುಕೊಂಡರೂ ಅವನನ್ನು ಹಾಗೆಯೇ ಆತ್ಮ ತಯಾರಿ ಮಾಡಬಲ್ಲದು. ಜ್ಞಾನಿಯಾಗಿ, ಅಜ್ಞಾನಿಯಾಗಿ ಎರಡು ವಿಧಗಳಾಗಿ ತಯಾರು ಮಾಡುವ ಸಾಮರ್ಥ್ಯ ಆತ್ಮಕ್ಕಿದೆ. ಆತ್ಮ ಮನುಷ್ಯನ ಒಂದು ಭಾವನೆಯನ್ನು ಅನುಸರಿಸಿ ಅವನನ್ನು ತಯಾರು ಮಾಡಿ, ತನಗೆ ಏನೂ ತಿಳಿಯದಂತಿರುತ್ತದೆ.

**ಪ್ರಶ್ನೆ :– ದೇವರು ಭಗವಂತನಾಗಿ ರೂಪ ಬದಲಾಯಿಸಿಕೊಂಡು ಬಂದಾಗ ಭಗವಂತನ ಶರೀರದಲ್ಲಿ ಸಹ ಮೂರು ಆತ್ಮಗಳಿರುತ್ತವೆ ಎಂದು ಗತದಲ್ಲಿ ನೀವು**

**ಹೇಳಿದ್ದೀರ. ಧರ್ಮಸಂಸ್ಥಾಪನೆಗೆ ಭಗವಂತನಾಗಿ ದೇವರು ಬಂದರೇ ಭಗವಂತನ ಶರೀರದಲ್ಲಿರುವ ದೇವರು ತನ್ನ ಧರ್ಮಗಳನ್ನು ತಿಳಿಸುತ್ತಾನಾ? ಅಥವಾ ಶರೀರದಲ್ಲಿರುವ ತನ್ನ ಧರ್ಮಗಳನ್ನು ಕುರಿತು ಹೇಳುತ್ತಾನಾ? ಆತ್ಮ, ಪರಮಾತ್ಮ ಇಬ್ಬರೂ ಅಲ್ಲದೇ ಭಗವಂತನ ಶರೀರದಲ್ಲಿರುವ ಜೀವಾತ್ಮನೇ ದೇವರ ಧರ್ಮಗಳನ್ನು ತಿಳಿಸುವ ಸಾಮರ್ಥ್ಯ ಹೊಂದಿರುತ್ತಾನಾ? ಈಗ ಹೇಳಿರಿ?**

**ಉತ್ತರ :–** ಹೀಗೆ ಪ್ರಶ್ನಿಸುವುದು ಬಂದರೇ ನಿಮಗೆ ಜ್ಞಾನವು ಸುಲಭವಾಗಿ ಅರ್ಥವಾಗಬಲ್ಲದು. ನನಗೆ ಹೇಳುವುದಕ್ಕೆ ಚೆನ್ನಾಗಿರುತ್ತದೆ. ಭಗವಂತನು ಭೂಮಿಮೇಲಕ್ಕೆ ಬಂದರೇ ಆತನ ಶರೀರದಲ್ಲಿ ಮೂರು ಆತ್ಮಗಳಿರುವುದು ವಾಸ್ತವವೆ. ಆದರೇ ಅದರಲ್ಲಿ ಜೀವಾತ್ಮ, ಜೀವಾತ್ಮ ಧರ್ಮಗಳನ್ನೇ ಹೊಂದಿರುತ್ತದೆ. ಹಾಗೆಯೇ ಆತ್ಮ, ಆತ್ಮ ಧರ್ಮಗಳನ್ನು ಅತಿಕ್ರಮಿಸದೇ ನಡೆದುಕೊಳ್ಳುತ್ತಿರುತ್ತದೆ. ದೇವರು ಭಗವಂತನ ಶರೀರದಲ್ಲಿದ್ದರೂ ತನ್ನ ಪದ್ಧತಿ ಪ್ರಕಾರ ತಾನಿರುತ್ತಾನೆ. ಮೂರು ಆತ್ಮಗಳು ಸಾಧಾರಣ ಶರೀರದಲ್ಲಿ ಇರುವಹಾಗೆಯೇ ಇರುತ್ತವೆ, ಯಾವ ವ್ಯತ್ಯಾಸವಿರುವುದಿಲ್ಲ. ಭಗವಂತನ ಶರೀರದಲ್ಲಿ ಇರುವ ದೇವರು ತನ್ನ ಧರ್ಮಗಳನ್ನು ತಿಳಿಸುವುದಿಲ್ಲ. ಆತನು ಎಲ್ಲಿದ್ದರೂ ತನ್ನ ಧರ್ಮದ ಪ್ರಕಾರ ಕ್ರಿಯೆಗಳಿಲ್ಲದವನಾಗಿ ಇರುತ್ತಾನೆ. ಸಾಧಾರಣ ಮನುಷ್ಯನ ಶರೀರದಲ್ಲಿ ಇರುವಹಾಗೆಯೇ ಭಗವಂತನ ಶರೀರದಲ್ಲಿ ಸಹ ಸ್ಥಬ್ದತೆಯಾಗಿ ಸಾಕ್ಷಿಯಾಗಿ ಇರುತ್ತದೆ. ದೇವರು ಹೇಗಿರುತ್ತಾನೋ ಜೀವಿಯು ಸಹ ಯಾವ ಕೆಲಸವನ್ನೂ ಮಾಡಲಾರದವನಾಗಿ ಇರುತ್ತಾನೆ. ತಿಳಿಸಿಹೇಳುವ ಸಾಮರ್ಥ್ಯ ಜೀವಿಗೆ ಎಂದಿಗೂ ಇಲ್ಲ, ಭಗವಂತನ ಶರೀರದಲ್ಲಿ ಸಹ ಜೀವಿಯು ಕೈಲಾಗದವನಾಗಿ ಯಾವ ಕೆಲಸವನ್ನೂ ಮಾಡದವನಾಗಿ ಇರುತ್ತಾನೆ. ಭಗವಂತನ ಶರೀರದಲ್ಲಿರುವ ಜೀವಿಗೆ ಯಾವ ರಿಯಾಯಿತಿ ಇಲ್ಲ.

ಇನ್ನು ಭಗವಂತನಲ್ಲಿರುವ ಆತ್ಮ ವಿಷಯಕ್ಕೆ ಬಂದರೇ ಆತ್ಮ ತನ್ನ ಧರ್ಮದ ಪ್ರಕಾರವೇ ನಡೆದುಕೊಳ್ಳುತ್ತಿರುತ್ತದೆ. ಇಲ್ಲಿಗೇ ನಿಮಗೆ ಸ್ವಲ್ಪ ಅರ್ಥವಾಗಿರಬೇಕು. ಆತ್ಮ ಜೀವಿಯ ಭಾವನೆಯನ್ನು ಅನುಸರಿಸಿ ಪ್ರವರ್ತಿ

ಸುತ್ತದೆ ಎಂದು ಹೇಳಿದ್ದೇವೆ ಅಲ್ಲವೇ! ಹಾಗೆಯೇ ಜೀವಿಗಿರುವ ಶ್ರದ್ಧಾಶ್ರದ್ಧೆಗಳನ್ನು ಅನುಸರಿಸಿ ಜ್ಞಾನವನ್ನು, ಕರ್ಮಗಳನ್ನು ಅನುಸರಿಸಿ ಕಷ್ಟಸುಖಗಳನ್ನು ಉಂಟುಮಾಡುವ ಕೆಲಸಗಳನ್ನು ಮಾಡುತ್ತಿರುತ್ತದೆ. ದೇವರು ಭಗವಂತನಾಗಿ ಬಂದರೇ ತನ್ನನ್ನು ಗುರುತು ಹಿಡಿಯದ ವಿಧವಾಗಿ ಕರ್ಮಗಳನ್ನು ಸ್ವತಃವಾಗಿ ಸೃಷ್ಟಿಸಿಕೊಂಡು (ರಚಿಸಿಕೊಂಡು) ಬರುತ್ತಾನೆ. ಆತನು ತಯಾರಿಸಿಕೊಂಡಿರುವ ಕರ್ಮಗಳ ಪ್ರಕಾರ ಆತ್ಮ ಕೆಲಸಗಳನ್ನು ಕಲ್ಪಿಸಿ ಭಗವಂತನಿಗೆ ಸುಖದುಃಖಗಳನ್ನು ಅನುಭವಿಸುವಂತೆ ಮಾಡುತ್ತಿರುತ್ತದೆ. ಇನ್ನು ಜೀವಿಗಿರುವ ಉದ್ದೇಶವನ್ನು ಅನುಸರಿಸಿ ಭಕ್ತಿಮಾರ್ಗದಲ್ಲಿರುವ ಶ್ರದ್ಧೆಯನ್ನು ಅನುಸರಿಸಿ ಆತ್ಮ ಪ್ರವರ್ತಿಸುವುದೆಂದು ಹೇಳಿದ್ದೇವೆ. ಇಲ್ಲಿ ಭಗವಂತನ ಶರೀರದಲ್ಲಿ ಭಗವಂತನಾಗಿ ಬಂದಿರುವ ಜೀವಿಯು ತನ್ನ ಭಾವನೆಯಲ್ಲಿ ಪ್ರಜೆಗಳಿಗೆ ದೈವಧರ್ಮಗಳನ್ನು ತಿಳಿಸಿ, ಅಧರ್ಮಗಳನ್ನು ಪ್ರಜೆಗಳಲ್ಲಿ ಇಲ್ಲದೇ ಮಾಡಬೇಕೆಂಬ ಶ್ರದ್ಧೆಯನ್ನು ಹೊಂದಿರುವುದರಿಂದ, ಜೀವಿಯ ಭಾವನೆಯನ್ನು ಅನುಸರಿಸಿ, ಶ್ರದ್ಧೆಯನ್ನು ಅನುಸರಿಸಿ ಆತ್ಮ ಪ್ರವರ್ತಿಸುವುದರಿಂದ, ಜೀವಿಯ ಉದ್ದೇಶದಲ್ಲಿ ಅಜ್ಞಾನ ಸಂಬಂಧ ಭಾವನೆಗಳು ಇಲ್ಲದಿರುವುದರಿಂದ, ಆತ್ಮ ಪೂರ್ತಿಯಾಗಿ ಜ್ಞಾನ ಸಂಬಂಧ ಧರ್ಮಗಳನ್ನೇ ತಿಳಿಸುವುದಕ್ಕೆ ಸಜ್ಜಾಗುವುದು. ಆತ್ಮಕ್ಕೆ ದೇವರ ಧರ್ಮಗಳೆನ್ನಲ್ಪಡುವ ತನ್ನ ಧರ್ಮಗಳು (ಆತ್ಮ ಧರ್ಮಗಳು) ಚೆನ್ನಾಗಿ ತಿಳಿದಿರುವುದರಿಂದ ದೈವಧರ್ಮಗಳನ್ನೇ ಹೇಳುವುದು. ಭಗವಂತನ ಮಾತುಗಳಲ್ಲಿ ಯಾವಾಗ ದೈವಧರ್ಮಗಳನ್ನು ಬೋಧಿಸಬೇಕೋ, ಎಲ್ಲಿ ಬೋಧಿಸಬೇಕೋ, ಯಾರೊಂದಿಗೆ ಹೇಳಬೇಕೋ ಅವರೊಂದಿಗೇ ಹೇಳುವುದು. ಕೃಷ್ಣನಾಗಿ ಬಂದಾಗ ಸಮಯನೋಡಿ ಯಾರಿಗೂ ತಿಳಿಯದ ವಿಧವಾಗಿ, ಯುದ್ಧ ರಂಗದಲ್ಲಿ ಹೇಳುವುದಾಗಿದೆ. ಅದೂ ಒಬ್ಬ ವ್ಯಕ್ತಿಗೇ ಒಂದುಬಾರಿಯೇ ಬೋಧಿಸಲಾಗಿದೆ. ಭಗವಂತನಾಗಿ ಬಂದ ನಂತರ 90 ವರ್ಷಗಳ ವಯಸ್ಸಿನಲ್ಲಿ ಬೋಧಿಸುವುದು ನಡೆದಿದೆ. ಎಲ್ಲಿ, ಹೇಗೆ, ಯಾರಿಗೆ ಹೇಳಬೇಕೆಂಬ ವಿಷಯವು ಮೊದಲೇ ಪ್ರಣಾಳಿಕಬದ್ಧವಾಗಿ ಇರುತ್ತದೆ.

ಭಗವಂತನು ಬಂದಾಗ ಆತನ ಶರೀರದಲ್ಲಿಯೇ ಜೀವಾತ್ಮಗೆ ಇರುವ ಉದ್ದೇಶವನ್ನು ಅನುಸರಿಸಿ ಆತ್ಮ ಬೋಧಿಸುವುದು. ಭಗವಂತನ ಶರೀರದಲ್ಲಿ ಜೀವಿಯು ಮಾನವರಿಗೆ ಧರ್ಮಗಳನ್ನು ತಿಳಿಸಬೇಕೆಂಬ ಉದ್ದೇಶವನ್ನು ಹೊಂದಿರುವುದರಿಂದ ಆತ್ಮ ದೈವಧರ್ಮಗಳನ್ನು ಪೂರ್ತಿಯಾಗಿ ಹೊರಗೆ ಹೇಳುವುದು. ಭಗವಂತನಿಂದ ಧರ್ಮಗಳನ್ನು ತಿಳಿಸುವುದನ್ನು ಧರ್ಮಪ್ರತಿಷ್ಠಾಪನೆ ಎಂದಿದ್ದಾರೆ. ಭಗವಂತನ ಶರೀರದಲ್ಲಿನ ಆತ್ಮ ಧರ್ಮಸಂಸ್ಥಾಪನೆ ನಡೆಯುವಂತೆ ಧರ್ಮಗಳನ್ನು ಬೋಧಿಸುವುದೇ ಅಲ್ಲದೇ, ಇಂತಹ ಅಧರ್ಮಗಳಿವೆ ಎಂದು ನಿರ್ಣಯಿಸಿ ಹೇಳುವುದು. ಭಗವಂತನು ಬೋಧಿಸುವುದರಿಂದ ಧರ್ಮಗಳು, ಅಧರ್ಮಗಳು ಹೊರಗಿನ ಮನುಷ್ಯರಿಗೆ ತಿಳಿದುಹೋಗುವುದು. ಆಗ ಪ್ರಜೆಗಳು ಅಧರ್ಮಗಳನ್ನು ಬಿಟ್ಟು, ಧರ್ಮಗಳಕಡೆ ಬರುವುದಕ್ಕೆ ಪ್ರಯತ್ನಿಸುತ್ತಾರೆ. ಹಾಗೆ ಪ್ರಯತ್ನ ಮಾಡಿದಾಗ ಸ್ವಲ್ಪ ಕಾಲಕ್ಕೆ ಅಧರ್ಮವರರೆಲ್ಲರೂ ಇಲ್ಲದೇ ಬದಲಾಗಿಹೋಗಿ ಎಲ್ಲರೂ ಧರ್ಮವರರಾಗಿ ಬದಲಾಗಿಹೋಗುತ್ತಾರೆ. ಭಗವಂತನ ಶರೀರದಲ್ಲಿ ಜೀವಿಯಲ್ಲಿ ಧರ್ಮಗಳನ್ನು ತಿಳಿಸಬೇಕೆಂಬ ಉದ್ದೇಶ ಹೊರತುಪಡಿಸಿ, ಆತನ ಭಾವನೆಯಲ್ಲಿ ಯಾವ ಅಜ್ಞಾನ ಸಂಬಂಧ ಭಾವನೆಗಳಾಗಲೀ, ಅಜ್ಞಾನ ಉದ್ದೇಶಗಳಾಗಲೀ, ಅಜ್ಞಾನ ಶ್ರದ್ಧೆಯಾಗಲೀ ಇಲ್ಲದಿರುವುದರಿಂದ, ಭಗವಂತನು ಸ್ವಚ್ಛವಾದ, ಯಾವ ಅಜ್ಞಾನ ಕಾಲುಷ್ಯವಿಲ್ಲದ ಜ್ಞಾನವನ್ನು ಧರ್ಮಸಮೇತವಾಗಿ ಆತ್ಮ ಬೋಧಿಸುವುದು ನಡೆದಿದೆ. ಜೀವಿಯನ್ನು ಅನುಸರಿಸಿ ಆತ್ಮ ಜ್ಞಾನ, ಅಜ್ಞಾನವಾಗಿ ಪ್ರಜೆಗಳೆಲ್ಲರಲ್ಲಿ ನಡೆದರೆ, ಭಗವಂತನ ಶರೀರದಲ್ಲಿರುವ ಜೀವಿಯ ಭಾವನೆಯನ್ನು ಅನುಸರಿಸಿ ಆತ್ಮ ಕೇವಲ ಜ್ಞಾನ ಪದ್ಧತಿಯಾಗಿಯೇ ನಡೆಯಬೇಕಾಗಿ ಬಂದಿದೆ, ಹಾಗೆಯೇ ಬೋಧಿಸಿದೆ. ಆತ್ಮ ಸ್ವತಃವಾಗಿ ಏನೂ ಮಾಡುವುದಿಲ್ಲ. ಎಲ್ಲಾ ಜೀವಿಯನ್ನು ಅನುಸರಿಸಿ ಇರುತ್ತದೆ ಎಂದು ಅಂದಹಾಗೆ ಭಗವಂತನ ಶರೀರದಲ್ಲಿನ ಜೀವಿಯನ್ನು ಅನುಸರಿಸಿ ಆತ್ಮ ಪ್ರವರ್ತಿಸಿದೆ.

ಉಳಿದ ಮನುಷ್ಯರ ಶರೀರದಲ್ಲಿ ಜೀವಿಯು ಅಜ್ಞಾನ ಭಾವನೆಯಿಂದ ಇದ್ದರೇ ಅಜ್ಞಾನವನ್ನು, ಜ್ಞಾನ ಭಾವನೆಯಿಂದ ಇದ್ದರೇ ಜ್ಞಾನವನ್ನು ಬೋಧಿಸುವ ಆತ್ಮ, ಉಳಿದ ಪ್ರಜೆಗಳಲ್ಲಿ ಅಜ್ಞಾನವನ್ನು ಜ್ಞಾನವನ್ನು ಎರಡನ್ನೂ ಬೋಧಿಸಿದೆ. ಪ್ರತಿ ಮನುಷ್ಯ ಹೆಚ್ಚು ಅಜ್ಞಾನ ಭಾವನೆಗಳು, ಕಡಿಮೆ ಜ್ಞಾನ ಭಾವನೆಗಳು ಹೊಂದಿರುವುದರಿಂದ ಹಾಗೆಯೇ ಹೆಚ್ಚು ಅಜ್ಞಾನವನ್ನು ಕಡಿಮೆ ಜ್ಞಾನವನ್ನು ಬೋಧಿಸುತ್ತಾ ಬರುವಾಗ ಸ್ವಲ್ಪ ಕಾಲಕ್ಕೆ ಎಂದರೇ ಯುಗದ ಕಾಲಕ್ಕೆ (ಕೆಲವು ಲಕ್ಷಗಳ ವರ್ಷಗಳಿಗೆ) ಭೂಮಿಮೇಲೆ ಜ್ಞಾನವಿಲ್ಲದೇ ಎಲ್ಲಾ ಅಜ್ಞಾನವಾಗಿ ಬದಲಾಗಿ ಹೋಗುವುದರಿಂದ ಅಧರ್ಮಗಳು ವೃದ್ಧಿಹೊಂದಿ ಧರ್ಮಗಳು ಇಲ್ಲದೇ ಹೋಗುತ್ತಿವೆ. ದೇವರು ಭಗವಂತನಾಗಿ ಧರ್ಮ ಸಂಸ್ಥಾಪನಾರ್ಥ ಬರುವುದರಿಂದ ಭಗವಂತನ ಶರೀರದಲ್ಲಿನ ಜೀವಿಯ ಭಾವನೆಯನ್ನು ಅನುಸರಿಸಿ ಆತ್ಮವೇ ಧರ್ಮ ಸಂಸ್ಥಾಪನೆ ಮಾಡುತ್ತಿದೆ. ಅಧರ್ಮಗಳು ವೃದ್ಧಿಹೊಂದುವುದಕ್ಕೆ ಎಲ್ಲರ ಶರೀರಗಳು ವೇದಿಕೆಯಾಗಿದ್ದರೆ, ಧರ್ಮಗಳು ವೃದ್ಧಿಹೊಂದುವುದಕ್ಕೆ ಭಗವಂತನ ಶರೀರವು ಒಂದೇ ವೇದಿಕೆಯಾಗಿ ಇದೆ.

**ಪ್ರಶ್ನೆ :– ದೇವರು ಮನುಷ್ಯನಾಗಿ ಬಂದು ಸಾಧಾರಣ ಮನುಷ್ಯರಹಾಗೆ ಶ್ರಮಪಡದೇ ಭೂಮಿಮೇಲೆ ಇರುವ ಮನುಷ್ಯರಲ್ಲಿಯೇ ಜ್ಞಾನಿಗಳಾಗಿ ಇರುವವರಲ್ಲಿ ದೊಡ್ಡವನನ್ನು ಗುರುತಿಸಿ, ಅವನಲ್ಲಿ ಧರ್ಮಗಳು ತಿಳಿಯಬೇಕೆಂಬ ಭಾವನೆಯನ್ನು ಉಂಟುಮಾಡಿ, ಅವನ ಭಾವನೆ ಪ್ರಕಾರ ಆತ್ಮ ಧರ್ಮಗಳನ್ನು ತಿಳಿಸಬಹುದು ಅಲ್ಲವೇ! ಧರ್ಮಗಳನ್ನು ತಿಳಿಸುವುದು ಆತ್ಮವೇ ಆಗಿರುವುದರಿಂದ ಜ್ಞಾನವಿರುವ ಜೀವಿಯಲ್ಲಿ ಬದಲಾವಣೆ ತಂದು, ಅವನನ್ನು ಅನುಸರಿಸಿ ಆತ್ಮ ಧರ್ಮಗಳನ್ನು ತಿಳಿಸಬಹುದು ಅಲ್ಲವೇ! ಇದಕ್ಕೆ ನೀವೇನು ಹೇಳುವಿರಿ?**

**ಉತ್ತರ :–** ಹಾಗೆ ಮಾಡಿದರೇ ದೇವರು ಕೂಡಾ ಮನುಷ್ಯರಿಗಿಂತಲೂ ಹೀನವಾಗಿ ಇಳಿಜಾರಿ ಹೋದಂತಾಗುವುದು. ದೇವರು ತನ್ನ ಭಗವದ್ಗೀತೆಯಲ್ಲಿ ಒಂದುಕಡೆ "ಕರ್ಮ ವಿಸರ್ಗಃ" ಎಂದಿದ್ದಾನೆ. ಕರ್ಮವನ್ನು ಅತಿಚಿಕ್ಕದಾಗಿ ವಿಭಜಿಸಿ ನೋಡುವುದನ್ನು ಕರ್ಮ ವಿಸರ್ಗವೆಂದು ಹೇಳುತ್ತಾರೆ. ಪ್ರತಿ ಮನುಷ್ಯನನ್ನು

ಕರ್ಮ ಪ್ರಕಾರ ನಡೆಸುವುದೇ ಆತ್ಮವೊಂದರ ಕೆಲಸ. ಕರ್ಮ ವಿಸರ್ಗ ಪ್ರಕಾರ ಪ್ರತಿ ಚಿಕ್ಕ ಕರ್ಮವನ್ನು ಸಹ ಆತ್ಮ ಜಾರಿಗೆ ಮಾಡುವುದು. ಆತ್ಮ ಯಾರ ಕರ್ಮವನ್ನು ತೊಲಗಿಸುವುದಿಲ್ಲ, ಯಾರ ಕರ್ಮವನ್ನು ಹೆಚ್ಚಿಸುವುದಿಲ್ಲ. ಆತ್ಮ ತನ್ನ ಧರ್ಮವನ್ನು ಅತಿಕ್ರಮಿಸಿ ಎಂದೂ ಪ್ರವರ್ತಿಸುವುದಿಲ್ಲ. ಪ್ರತಿ ಚಿಕ್ಕ ಕರ್ಮವನ್ನು ಅನುಸರಿಸಿ ಆತ್ಮ ಕೆಲಸ ಮಾಡಬೇಕಾಗಿದೆ. ಆದ್ದರಿಂದ ಆತ್ಮ ಸ್ವತಃವಾಗಿ ಯಾವ ನಿರ್ಣಯ ತೆಗೆದುಕೊಳ್ಳುವುದಿಲ್ಲ. ಯಾರಲ್ಲೂ ಇಲ್ಲದ ಭಾವನೆಗಳನ್ನು ಕಲ್ಪಿಸುವುದಿಲ್ಲ. ಇರುವ ಭಾವನೆಯನ್ನು ತೊಲಗಿಸುವುದಿಲ್ಲ. ಜೀವಿಯನ್ನು ಹಾಗೆ ಬದಲಾಯಿಸಿ ಮಾಡಿದೆಯೆಂದುಕೊಳ್ಳಿ ಆಗ ಆತ್ಮಕ್ಕಿಂತಲೂ ದೇವರು ದೊಡ್ಡವನೆಂಬ ಭಾವನೆ ಇಲ್ಲದೇ ಹೋಗುವುದು. ದೇವರೊಂದಿಗೆ ಕೆಲಸವೇ ಇಲ್ಲದಂತೆ ಹೋಗುವುದು. ದೇವರ ಪಾತ್ರ ಸ್ವಲ್ಪವಾದರೂ ಇಲ್ಲದಿರುವುದರಿಂದ ದೇವರು ಇದ್ದರೂ ಒಂದೇ ಇಲ್ಲದಿದ್ದರೂ ಒಂದೇ ಆಗುವುದು. ಪ್ರಪಂಚವೆಲ್ಲವನ್ನೂ ಆತ್ಮವೇ ತನ್ನ ಅಧೀನದೊಳಗೆ ತೆಗೆದು ಕೊಂಡಂತಾಗುವುದು. ಹಾಗಲ್ಲದೇ ಆತ್ಮ ತನ್ನ ಕೆಲಸವನ್ನು ತಾನು ಮಾಡಿದರೇ ಆ ನಂತರ ಉಳಿದ ಕಾರ್ಯವನ್ನು ದೇವರು ಭಗವಂತನ ರೂಪದಲ್ಲಿ ಮಾಡುತ್ತಾನೆ. ದೇವರ ಪರಿಪಾಲನೆಯಲ್ಲಿ ಕರ್ಮ ಅತಿ ಸೂಕ್ಷ್ಮಾತಿ ಸೂಕ್ಷ್ಮವಾಗಿ ಇರುವುದರಿಂದ ಅದನ್ನು ಆತ್ಮ ತಪ್ಪದೇ ನೆರವೇರಿಸಬೇಕಾಗಿದೆ. ಹಾಗಲ್ಲದೇ ಆತ್ಮ ಸ್ವತಃವಾಗಿ ಪ್ರವರ್ತಿಸುವುದಿಲ್ಲ, ಸ್ವಂತ ನಿರ್ಣಯಗಳು ತೆಗೆದುಕೊಳ್ಳುವುದಿಲ್ಲ. ತನ್ನ ಧರ್ಮದ ಪ್ರಕಾರ ಮನುಷ್ಯನನ್ನು ಅನುಸರಿಸಿ ಜ್ಞಾನವನ್ನಾಗಲೀ, ಅಜ್ಞಾನವನ್ನಾಗಲೀ ತಿಳಿಸುವುದು. ಆತ್ಮ ಎಂದಿಗೂ ದೇವರ ಧರ್ಮದ ಪ್ರಕಾರ ಪ್ರವರ್ತಿಸುವುದೇ ಹೊರತು, ದೇವರ ಧರ್ಮವನ್ನು ಅತಿಕ್ರಮಿಸುವುದಿಲ್ಲ.

ಜ್ಞಾನಿಗಳಲ್ಲಿ ಉತ್ತಮೋತ್ತಮವಾದ ಜ್ಞಾನಿ ಯಾರಾದರೂ ಇದ್ದಾನೆಂದರೇ ಆತನಿಗಿರುವ ಹತ್ತು ಕ್ಷಣಗಳಲ್ಲಿ ಒಂದು ಕ್ಷಣವಾದರೂ ಅಜ್ಞಾನ ಭಾವನೆಯನ್ನು ಹೊಂದಿರುತ್ತಾನೆ. ಯಾರೂ ಅಜ್ಞಾನ ಭಾವನೆ ಪೂರ್ತಿಯಾಗಿ ಇಲ್ಲದಿರುವವನು ಇರುವುದಿಲ್ಲ. ಅಜ್ಞಾನ ಭಾವನೆಯಿಲ್ಲದಿರುವವನು ಹುಟ್ಟುವುದೇ ಇಲ್ಲ. ಹಿಂದಿನ

ಜನ್ಮದಲ್ಲಿ ಕರ್ಮ ಶೇಷವು ಇರುವವನೇ ಹುಟ್ಟುವನು. ಹುಟ್ಟಿದ ಪ್ರತಿಯೊಬ್ಬನಿಗು ಪಾಪಪುಣ್ಯ ಮಿಶ್ರಮ ಇರುವಂತೆ ಭಾವನೆಗಳು ಸಹ ಒಳ್ಳೆಯದು, ಕೆಟ್ಟದು ಮಿಶ್ರಮವಾಗಿರುತ್ತದೆ. ಹಾಗೆಯೇ ಜ್ಞಾನ ಅಜ್ಞಾನ ಶ್ರದ್ಧೆಗಳು ಹೊಂದಿರುತ್ತಾನೆ. ಬುದ್ಧಿ ಎರಡು ವಿಧ ಯೋಚನೆಗಳು ತೋರುವುದು ಸಹಜ ಬುದ್ಧಿಯಹಾಗೆ ಪ್ರತಿಯೊಬ್ಬನು ಜ್ಞಾನ ಅಜ್ಞಾನ ಎರಡು ಭಾವನೆಗಳು ಹೊಂದಿರುತ್ತಾರೆ. ಭೂಮಿಮೇಲೆ ಇವನು ದೊಡ್ಡ ಜ್ಞಾನಿ ಎಂದು ಪ್ರಖ್ಯಾತಿಯಾದವನನ್ನು ನೋಡಿದರೂ, ಹೆಚ್ಚು ಜ್ಞಾನಸಾಂಧ್ರತೆ ಹೊಂದಿರುವವನನ್ನು ಪರಿಶೀಲಿಸಿ ನೋಡಿದರೂ, ಅವನಲ್ಲಿ ನೂರಕ್ಕೆ ಶೇಕಡ ಹತ್ತರಷ್ಟಾದರೂ ಅಜ್ಞಾನವಿರುತ್ತದೆ. ಹಾಗಿರುವಾಗ ಆತ್ಮ ಅವನ ಅಜ್ಞಾನದಹಾಗೆ ಪ್ರವರ್ತಿಸಬೇಕಾಗಿ ಇರುತ್ತದೆ. ಪೂರ್ತಿ ಜ್ಞಾನ ಭಾವನೆಗಳು ನೂರಕ್ಕೆ ನೂರುಪಾಲು ಇರುವವರಿಲ್ಲ. ಆದ್ದರಿಂದ ಆತ್ಮ ನೂರಕ್ಕೆ ನೂರುಪಾಲು ಜ್ಞಾನವನ್ನು ಬೋಧಿಸುವುದಿಲ್ಲ. ತನ್ನ ಬೋಧನೆಯಿಂದ ಅಧರ್ಮಗಳು ಬೆಳೆದರೂ, ಅದಕ್ಕೆ ತಕ್ಕ ವಿಧವಾಗಿ ಧರ್ಮ ಸಂಸ್ಥಾಪನೆ ಮಾಡುವುದಕ್ಕೆ ದೇವರು ಮೊದಲೇ ತನ್ನ ಪ್ರಣಾಳಿಕೆಯನ್ನು ಸಿದ್ಧಮಾಡಿ ಇಟ್ಟಿದ್ದಾನೆ. ಹಾಗಿರುವಾಗಲೇ ದೇವರು ದೇವರಾಗಿ ಲೆಕ್ಕಿಸಲ್ಪಡುತ್ತಾನೆ. ದೇವರು ಭಗವಂತನಾಗಿ ಬಾರದೇ ಹೋದರೇ ಯಾವ ಸಂಬಂಧವಿಲ್ಲದ ದೇವರೊಂದಿಗೆ ಯಾರಿಗೂ ಕೆಲಸವಿಲ್ಲ. ಹಾಗಿರುವಾಗ ದೇವರಿದ್ದರೂ ಒಂದೇ, ಇಲ್ಲದೇ ಹೋದರೂ ಒಂದೇ ಆಗುತ್ತದೆ.

ಈಗಾಗಲೇ ಆತ್ಮಗೆ ಆಸ್ತಿಯೆಲ್ಲಾ ಬರೆದುಕೊಟ್ಟಂತೆ, ಶರೀರದಲ್ಲಿನ ಸರ್ವಹಕ್ಕುಗಳು ಆತ್ಮಗೆ ಕೊಟ್ಟು ಶರೀರಕ್ಕೆ ಆತ್ಮವನ್ನು ಅಧಿಪತಿಯಾಗಿ ಮಾಡಿರುವುದರಿಂದ, ಶರೀರವೆಲ್ಲದಕ್ಕು ರಾಜ ಆತ್ಮವಾಗಿದೆ. ಶರೀರದಲ್ಲಿ ಪರಮಾತ್ಮ ಇದ್ದರೂ ಅಧಿಕಾರವಿಲ್ಲದವನಾಗಿ ಚಲನೆ ಇಲ್ಲದೆ ಇರಬೇಕಾಗಿ ಬಂದಿದೆ. ಪರಮಾತ್ಮ ಇರುವಿಕೆಯನ್ನು ಸ್ವಲ್ಪವಾದರೂ ತಿಳಿಯುವುದಕಕ್ಕೆ ಅವಕಾಶವಿಲ್ಲ. ದೇವರು ಹೊರಗೆ ತಿಳಿಯುವ ಅವಕಾಶ ಒಂದೇ ಇದೆ. ಆಗಲೂ ಸಹ ಬರದಂತೆ ಮಾಡಿ ಆ ಕೆಲಸವನ್ನು ಸಹ ಮಾಡುತ್ತೇವೆ ಎನ್ನುವುದು ಪರಮಾತ್ಮ

ಇರುವಿಕೆಯನ್ನು ಸ್ವಲ್ಪವೂ ತಿಳಿಯದಂತೆ ಮಾಡುವುದೇ ಆಗುವುದು. ಆದ್ದರಿಂದ ಅದು ಒಳ್ಳೆಯ ಕೆಲಸವಲ್ಲ. ದೇವರು ಎಂದಿಗೂ ಅಧಿಪತಿಯಾಗಿ ಇರುವಾಗ, ಆತನ ಕೆಳಗೆ ಪರಿವಾರವಾಗಿ ಆತ್ಮದಿಂದ ಉಳಿದವರೆಲ್ಲರೂ ಇರಬೇಕು. ಯಾರಕೆಲಸ ಅವರಿಗಿದ್ದಾಗಲೇ ದೇವರ ಪ್ರಣಾಳಿಕೆ ಸರಿಯಾಗಿ ನಡೆದಂತಾ ಗುವುದು. ಎಲ್ಲ ವಿಧಗಳಲ್ಲಿ ಆಲೋಚಿಸಿ ಯಾವುದು ಸರಿಯಾದ ಕೆಲಸವೋ ಅದನ್ನೇ ದೇವರು ನಿರ್ಣಯಿಸಿ ಇಟ್ಟಿದ್ದಾನೆ. ದೇವರು ನಿರ್ಣಯಿಸಿದ ಕರ್ಮಬದ್ಧ ಕಾನೂನನ್ನು ಮನುಷ್ಯರ ಸಲುವಾಗಿಯಾಗಲೀ, ಆತ್ಮ ಸಲುವಾಗಾಗಲೀ ಬದಲಾಯಿಸಲಾರೆವು. ದೇವರು ನಿರ್ಣಯಿಸಿರುವುದು ನಿರ್ಣಯಿಸಿದಂತೆಯೇ ನಡೆಯುವುದು. ಅದೇ ಉತ್ತಮ ಪದ್ಧತಿ.

ಜೀವಾತ್ಮ, ಆತ್ಮ, ಪರಮಾತ್ಮ ಮೂರು ಒಂದೇ ಹಣ್ಣಿನಲ್ಲಿನ ಭಾಗಗಳೇ. ಅದರಲ್ಲಿ ಪರಮಾತ್ಮ ದೇವರಾಗಿ ಪೂರ್ತಿ ದೊಡ್ಡವನಾಗಿರುವಾಗ ಆತ್ಮ, ಪರಮಾತ್ಮ ನಂತರ ಎರಡನೆಯ ಸ್ಥಾನದಲ್ಲಿದ್ದು, ಪರಮಾತ್ಮ ಆಜ್ಞೆಯಿಂದ ಶರೀರಗಳಲ್ಲಿ ನಡೆಯುವುದು ವಿಧಿಯಾಗಿ ಮಾಡಲ್ಪಟ್ಟಿದೆ. ಮೂರನೆಯ ಭಾಗವಾದ ಜೀವಾತ್ಮ, ಪರಮಾತ್ಮ, ಆತ್ಮಗಳಿಗಿಂತ ಚಿಕ್ಕದಾಗಿದ್ದೂ ಶರೀರದಲ್ಲಿ ಎಲ್ಲ ಅನುಭವಗಳನ್ನು ಹೊಂದುತ್ತಿರುತ್ತಾನೆ. ಉಳಿದ ಆತ್ಮ, ಪರಮಾತ್ಮ ಅನುಭವವಿಲ್ಲದವರಾಗಿ ಇದ್ದರೇ, ಜೀವಿಯ ಅನುಭವಗಳಿಗಾಗಿಯೇ ಆತ್ಮ, ಪರಮಾತ್ಮ ಇಬ್ಬರು ಕೆಲಸ ಮಾಡುತ್ತಿದ್ದಾರೆ. ಶರೀರದಲ್ಲಿ ಪರಮಾತ್ಮಗಾಗಿ ಯಾರೂ ಕೆಲಸ ಮಾಡಲಿಲ್ಲ. ಹಾಗೆಯೇ ಆತ್ಮಗಾಗಿ ಸಹ ಯಾರೂ ಕೆಲಸ ಮಾಡಲಿಲ್ಲ. ಆದರೇ ಜೀವಾತ್ಮಗಾಗಿ ಆತ್ಮ, ಪರಮಾತ್ಮ ಇಬ್ಬರೂ ಕೆಲಸಮಾಡಬೇಕಾಗಿದೆ. ಜೀವಿಗಾಗಿ ಆತ್ಮ, ಪರಮಾತ್ಮ ಇಬ್ಬರೂ ಕೆಲಸಮಾಡುತ್ತಿರುವಾಗ, ಜೀವಾತ್ಮ ಏನೂ ಮಾಡದೆ ಆ ಇಬ್ಬರೂ ಕೊಟ್ಟಿರುವುದನ್ನು ಅನುಭವಿಸುತ್ತಿದ್ದಾನೆ. "ಶರೀರದಲ್ಲಿ ಎಲ್ಲಾ ಅನುಭವಿಸುವವನು ನಾನೊಬ್ಬನೇ. ನನ್ನೊಂದಿಗೆ ಸಮಾನವಾಗಿ ಯಾರೂ ಏನೂ ಅನುಭವಿಸುತ್ತಿಲ್ಲ. ಕೆಲಸ ಮಾಡದೆ ಅನುಭವಿಸುವವನು ನಾನೇ ದೊಡ್ಡವನಲ್ಲವೇ"! ಎಂದು ಜೀವಾತ್ಮ ಅಜ್ಞಾನದಿಂದ ಆಗಾಗ ಅಂದುಕೊಳ್ಳುತ್ತಿದ್ದಾನೆ.

**ಪ್ರಶ್ನೆ :– ಶರೀರವೆಂಬ ವಿಶ್ವವಿದ್ಯಾಲಯದಲ್ಲಿ ವಿದ್ಯಾರ್ಥಿಗಳು ಜೀವಿಗಳೆಂದು ತಿಳಿದಿದೆ. ವಿಶ್ವವಿದ್ಯಾಲಯದಲ್ಲಿ ಬೋಧಿಸುವ ಬೋಧಕನು ಆತ್ಮವೆಂದು ತಿಳಿಯಿತು. ವಿಶ್ವವಿದ್ಯಾಲಯಗಳೆಲ್ಲವುಗಳಿಗೂ ಪ್ರಿನ್ಸಿಪಾಲ್ (ಸೂತ್ರಧಾರಿ) ಆದ ದೇವರು ಒಬ್ಬನೇ ಎಂದು ತಿಳಿದಿದೆ. ವಿದ್ಯಾರ್ಥಿಯಾದ ಜೀವಿಯು ಬೋಧಕನಾದ ಆತ್ಮಗೆ, ಸೂತ್ರಧಾರಿಯಾದ ಪರಮಾತ್ಮಗೆ ಯಾರಿಗೆ ಹತ್ತಿರವಾಗಿ ಇರುತ್ತಾನೆ? ಯಾರನ್ನು ಹೆಚ್ಚಾಗಿ ಪ್ರೀತಿಸುತ್ತಾನೆ?**

**ಉತ್ತರ :–** ಶರೀರ ವಿಶ್ವವಿದ್ಯಾಲಯದಲ್ಲಿ ಬೋಧಿಸುವವನು ಆತ್ಮವೆಂದು ಜೀವಿಗೆ ತಿಳಿದಿಲ್ಲ. ವಿಶ್ವವಿದ್ಯಾಲಯ ಸೂತ್ರಧಾರಿಯಾದ ದೇವರೇ ಬೋಧಿಸುತ್ತಿದ್ದಾನೆಂದು ಅಂದುಕೊಳ್ಳುವುದರಿಂದ ನಿಜವಾಗಿ ಬೋಧಿಸುವವನು ಆತ್ಮವೆಂದು ಜೀವಿಗೆ ತಿಳಿಯದೇ ಹೋಗಿದೆ. ದೇವರೇ ನಿತ್ಯವೂ ಜೀವಿಗೆ ಹತ್ತಿರವಾಗಿದ್ದಾನೆಂದು ಜೀವಿಯು ಅಂದುಕೊಳ್ಳುವುದು ನಡೆಯುತ್ತಿದೆ. ವಾಸ್ತವವಾಗಿ ಜೀವಿಗೆ ಹತ್ತಿರವಾಗಿರುವವನು ಆತ್ಮವಾದರೇ ಜೀವಿಗೆ ಆತ್ಮವೆನ್ನುವುದು ಒಂದಿದೆಯೆಂಬ ವಿಷಯವೇ ತಿಳಿಯದಿರುವುದರಿಂದ ಶರೀರ ವಿಶ್ವವಿದ್ಯಾಲಯದಲ್ಲಿ ಜೀವಿಯು, ದೇವರು ಇಬ್ಬರೇ ಇದ್ದಾರೆಂದು ಅಂದುಕೊಳ್ಳುವುದರಿಂದ, ಜೀವಿಯು ತನಗೆ ಹತ್ತಿರವಾಗಿ ದೇವರಿದ್ದಾನೆಂದು ಅಂದುಕೊಳ್ಳುವುದಾಗಿದೆ. ಜೀವಿಯ ಲೆಕ್ಕದಲ್ಲಿ ಆತ್ಮವೆಂದರೇ ಯಾರೋ ತಿಳಿದಿಲ್ಲ. ಇತರರು ಆತ್ಮವನ್ನು ಕುರಿತು ಹೇಳಿದರೂ ಕೇಳುವಂತಿಲ್ಲ.

**ಪ್ರಶ್ನೆ :– "ಮುಕ್ತಿಗಾಗಿ ಮೂರು ವಿದ್ಯೆಗಳು" ಎಂದಿದ್ದೀರ. ಈ ಮೂರು ವಿದ್ಯೆಗಳನ್ನು ಯಾರು ಕಲಿಸುತ್ತಾರೆ? ಎಲ್ಲಿ ಕಲಿಸುತ್ತಾರೆ?**

**ಉತ್ತರ:–** ಮುಕ್ತಿಗಾಗಿ ಮೂರು ವಿದ್ಯೆಗಳಿರುವುದು ವಾಸ್ತವವೇ. ಆ ಮೂರು ವಿದ್ಯೆಗಳನ್ನು ಕಲಿಸುವವನು ಆತ್ಮವೇ. ಆತ್ಮ ಹೊರತು ಇತರರು ಕಲಿಸುವವರು ಯಾರೂ ಇಲ್ಲ. ಶರೀರವೇ ವಿಶ್ವವಿದ್ಯಾಲಯವಾಗಿ ಇರುವುದರಿಂದ ಶರೀರದಲ್ಲಿಯೇ ಈ ಮೂರು ವಿದ್ಯೆಗಳನ್ನು ಕಲಿಸಬೇಕಾಗಿದೆ.

**ಪ್ರಶ್ನೆ :– ಮೂರು ವಿದ್ಯೆಗಳು ಯಾವುವು?**

**ಉತ್ತರ :–** ಸಾತ್ವಿಕ, ರಾಜಸ, ತಾಮಸ ಎಂಬ ಮೂರು ರೋಗಗಳನ್ನು ಸೇರಿಸಿ **"ಮಾಯೆ"** ಎಂದು ಹೇಳುತ್ತಿದ್ದೇವೆ. ಮಾಯೆ ರೋಗ ಮನುಷ್ಯರನ್ನು ಆವರಿಸಿ ಇರುವುದರಿಂದ ಆ ಮೂರು ವಿಧಗಳ ಮಾಯೆ ರೋಗ ಹೋಗಬೇಕೆಂದರೇ ಅದಕ್ಕೆ ಸರಿಯಾದ ಮೂರು ಔಷಧಿಗಳಿವೆ. ಆ ಔಷಧಿಗಳ ಹೆಸರು **ಕರ್ಮಯೋಗ, ಬ್ರಹ್ಮಯೋಗ, ಭಕ್ತಯೋಗ** ಎಂಬ ಮೂರು ಯೋಗಗಳಿವೆ. ಈ ಮೂರು ಯೋಗಗಳಲ್ಲಿ ಯಾವ ಒಂದು ಯೋಗವು ಕೈಲಾದರೂ ಮಾಯೆ ರೋಗವು ನಿವಾರಣೆಯಾಗಬಲ್ಲದು. ಚಿಕ್ಕವಯಸ್ಸಿನಿಂದ ಅರವತ್ತು (60) ವರ್ಷಗಳವರೆಗು ಕರ್ಮಯೋಗವನ್ನು ಆಚರಿಸಬಹುದು. ನಂತರ ಸಹ ಕರ್ಮಯೋಗವನ್ನೇ ಆಚರಿಸಬಹುದು. ಬ್ರಹ್ಮಯೋಗ ಮಾಡಬೇಕೆಂದುಕೊಂಡವರು 50 ಅಥವಾ 60 ವರ್ಷಗಳ ವಯಸ್ಸಿನಿಂದ ಆಚರಿಸುವುದಕ್ಕೆ ಅನುಕೂಲವಾಗಿರುತ್ತದೆ. ಇನ್ನು ಭಕ್ತಿಯೋಗವನ್ನು ಆಚರಿಸಬೇಕೆಂದು ಅಂದುಕೊಳ್ಳುವವರು ಚಿಕ್ಕವಯಸ್ಸಿನಿಂದ ಯಾವ ವಯಸ್ಸಿನಲ್ಲಾದರೂ ಆಚರಿಸಬಹುದು. ಭಕ್ತಿಯೋಗವು ಜೀವನದ ಎಲ್ಲ ದಶೆಗಳಲ್ಲಿ ಸರಿಹೋಗುವುದು. ಕರ್ಮಯೋಗವು ಸಹ ಅಷ್ಟೆಯಾಗಿರುತ್ತದೆ. ಜೀವನದಲ್ಲಿ ಯಾವಾಗಲಾದರೂ ಆಚರಿಸಬಹುದು. ಒಂದು ಬ್ರಹ್ಮಯೋಗವು ಮಾತ್ರ ಆಚರಿಸುವುದರಲ್ಲಿ ಜಾಗೃತಿ ವಹಿಸಬೇಕಾಗಿರುವ ಕೆಲಸವಿದೆ. ಆರೋಗ್ಯ ಅನಾರೋಗ್ಯ ಸಮಸ್ಯೆಗಳನ್ನು ನೋಡಿಕೊಂಡು ಮಾಡಬೇಕಾಗಿರುವುದೇ ಅಲ್ಲದೇ ಜವಾಬ್ದಾರಿ ಇಲ್ಲದ ಜೀವನ ಇರುವವರಿಗೆ 50 ವರ್ಷಗಳ ಮೇಲಿನ ವಯಸ್ಸಿರುವವರಿಗೆ ಸರಿಹೋಗುವುದೆಂದು ಅಂದುಕೊಳ್ಳುತ್ತಿದ್ದೇನೆ. ಕರ್ಮ, ಬ್ರಹ್ಮ, ಭಕ್ತಿ ಎಂಬ ಮೂರು ಯೋಗಗಳಲ್ಲಿ ಯಾವುದು ಆಚರಿಸಿದರೂ, ಅದರಿಂದ ತ್ರಿಗುಣ ಮಾಯೆಯಿಂದ ಹೊರಬೀಳಬಹುದು.

**ಪ್ರಶ್ನೆ :– "ದೈವೀ ಹ್ಯೇಷಾ ಗುಣಮಯಿ ಮಮ ಮಾಯಾ ದುರತ್ಯಯಾ" ಈ ಶ್ಲೋಕದಲ್ಲಿ 'ದೈವವಾದ ನಾನು ತಯಾರಿ ಮಾಡಿರುವ ಮಾಯೆ' ಎಂದು ಹೇಳಲ್ಪಟ್ಟಿದೆ. "ನನ್ನನ್ನು ಶರಣು ಬೇಡಿದವನು ಹೊರತು ಯಾರೂ ನನ್ನ**

**ಮಾಯೆಯನ್ನು ದಾಟಲಾರರು" ಎಂದು ಹೇಳಿದ್ದೀರ. ಇಲ್ಲಿ ದೈವ ಎಂದರೇ ಯಾರು? ಆತ್ಮವೆಂದು ಅರ್ಥ ಮಾಡಿಕೊಳ್ಳಬೇಕಾ? ಅಥವಾ ಪರಮಾತ್ಮನನ್ನಾ? ಮಾಯೆಯನ್ನು ತಯಾರು ಮಾಡಿರುವುದು ಯಾರು? ಶರಣು ಯಾರನ್ನು ಬೇಡಬೇಕು? ಹೇಗೆ ಬೇಡಬೇಕು?**

**ಉತ್ತರ :– "ಮಾಯೆ"** ಎನ್ನುವುದು ತ್ರಿಗುಣ ನಿರ್ಮಿತವಾದುದು. ಮೂರು ಗುಣಗಳನ್ನು ಸೇರಿಸಿ **ಮಾಯೆ** ಎಂದು ಹೇಳುತ್ತಿದ್ದೇವೆ. ಮಾಯೆಯನ್ನು ಜಯಿಸುವುದು ಅಸಾಧ್ಯವೆಂದು ಹೇಳಲ್ಪಟ್ಟಿದೆ. ಮಾಯೆಯನ್ನು ಸ್ವತಃವಾಗಿ ದೇವರೇ ತಯಾರಿ ಮಾಡಿದ್ದಾನೆ. ಆದ್ದರಿಂದ ಅದು ದೈವ ನಿರ್ಮಿತವಾದುದೆಂದು ಹೇಳಿದ್ದಾರೆ. ಇಲ್ಲಿ ಎಲ್ಲರಿಗೂ ಒಂದು ಪ್ರಶ್ನೆ ಬರಬಹುದು. ಅದೇನೆಂದರೇ! ದೇವರು ಯಾವುದನ್ನೂ ಮಾಡುವವನಲ್ಲ, ಕ್ರಿಯಾರಹಿತನೆಂದು ಹೇಳಿದ್ದೀರ ಅಲ್ಲವೇ! ಹಾಗಿರುವಾಗ ದೇವರು ಮಾಯೆಯನ್ನು ಹೇಗೆ ತಯಾರಿ ಮಾಡಿದ್ದಾನೆ? ದೇವರು ಕೆಲಸ ಮಾಡದವನಾಗಿರುವಾಗ ಮಾಯೆಯನ್ನು ತಯಾರಿ ಮಾಡಲಿಲ್ಲವೆಂದೇ ಅಲ್ಲವೇ ಅರ್ಥವೆಂದು ಕೇಳಬಹುದು. ಅದಕ್ಕೆ ನಮ್ಮ ಸಮಾಧಾನ ಹೀಗಿದೆ. ದೇವರು ಸ್ವತಃವಾಗಿ ಕೆಲಸಮಾಡಿ ಮೂರು ಗುಣ ಭಾಗಗಳನ್ನು, ಅವುಗಳಲ್ಲಿ 36 ಗುಣಗಳನ್ನು, ಅದರಲ್ಲಿ ಸೀಳಿಕೆಗಳಾದ ಚಿಕ್ಕ ಗುಣಗಳನ್ನು 108 ಆಗಿ ಮಾಡಿದ್ದಾನೆ. ಒಂದೊಂದು ಗುಣ ಭಾಗದಲ್ಲಿ 108 ಗುಣಭಾಗಗಳಿರುವಾಗ, ಮೂರು ಗುಣಭಾಗಗಳಲ್ಲಿ 324 ಒಟ್ಟು ಗುಣಗಳಿವೆ. ಈ ಎಲ್ಲಾ ಗುಣಗಳನ್ನು ಸೇರಿಸಿ "ಮಾಯೆ" ಎಂದು ಹೆಸರು ಇಡಲಾಗಿದೆ. ಮಾಯೆ ಎಂಬ ಗುಣಗಳನ್ನು ದೇವರೇ ಸ್ವತಃವಾಗಿ ತಯಾರಿ ಮಾಡಿರುವುದರಿಂದ ಆ ಮಾಯೆಯನ್ನು ದಾಟುವುದು ಬಹಳ ದುಸ್ಸಾಧ್ಯವಾದ ಕೆಲಸವಾಗಿರುತ್ತದೆ. ಎಂಥವನಾದರೂ ಮಾಯೆಯನ್ನು ದಾಟುವುದು ದುಸ್ಸಾಧ್ಯ.

'ದೇವರು ಕೆಲಸ ಮಾಡದವನು' ಎಂಬ ಮಾತು ಸತ್ಯ. ಆದರೇ ಆ ಮಾತು ಯಾವಾಗಿನಿಂದ ಅನ್ವಯಿಸುವುದು ಎಂದು ಆಲೋಚಿಸಿದರೇ ಸೃಷ್ಠಿಗೆ ಪೂರ್ವದಲ್ಲಿ ದೇವರಿಗೆ ಅನ್ವಯಿಸುವ ನಿಯಮಗಳು ಸೃಷ್ಠಿ ನಂತರ

ಅನ್ವಯಿಸುವುದಿಲ್ಲ. ಸೃಷ್ಠಿಗೆ ಪೂರ್ವದಲ್ಲಿ ದೇವರು ಕೆಲಸ ಮಾಡುವವನಾಗಿದ್ದು, ಸೃಷ್ಠಿಯನ್ನು ದೇವರೇ ತಯಾರಿ ಮಾಡಿ, ಸೃಷ್ಠಿಗೆ ಅನುಬಂಧವಾಗಿರುವ ಎಲ್ಲವನ್ನೂ ಮಾಯೆಯೊಂದಿಗೆ ಸಹ ತಯಾರಿ ಮಾಡುವುದಾಗಿದೆ. ಖಗೋಳದಲ್ಲಿನ ಭೂತಗಳನ್ನು, ಗ್ರಹಗಳನ್ನು, ಭೂಗೋಳದಲ್ಲಿನ ಮನುಷ್ಯರನ್ನು, ಪ್ರಾಣಿಗಳನ್ನು ಕ್ರಿಮಿಕೀಟಗಳನ್ನು ಮೊದಲಾದವುಗಳನ್ನು ತಯಾರಿ ಮಾಡಿ ಸೃಷ್ಠಿಯನ್ನು ಸೃಷ್ಠಿಸಿ ನಂತರ ದೇವರು ಮೊದಲೇ ನಿರ್ಣಯಿಸಿಕೊಂಡ ತನ್ನ ಧರ್ಮಗಳ ಪ್ರಕಾರ ನಡೆದುಕೊಳ್ಳುವಾಗ, ಹಾಗೆಯೇ ಮೊದಲೇ ನಿರ್ಣ ಯಿಸಲ್ಪಟ್ಟಿರುವ ಧರ್ಮಗಳ ಪ್ರಕಾರ ಆತ್ಮ, ಜೀವಾತ್ಮ ಪ್ರವರ್ತಿಸಲು ಆರಂಭಮಾಡಿವೆ. ಅಂದಿನಿಂದ ಇಂದಿನವರೆಗು ದೇವರು ಸೃಷ್ಠಿ ಪೂರ್ವದಲ್ಲಿ ತಯಾರಿ ಮಾಡಿರುವ ಧರ್ಮಗಳ ಪ್ರಕಾರವೇ ಜಗತಿ ನಡೆಯುತ್ತಿದೆ. ಮಾಯೆಯನ್ನು ಆತ್ಮ ತಯಾರಿ ಮಾಡಲಿಲ್ಲ. ಪರಮಾತ್ಮವೆನ್ನುವ ದೇವರೇ ಎಲ್ಲರನ್ನೂ, ಎಲ್ಲವನ್ನೂ ಸೃಷ್ಠಿಸಿದ್ದಾನೆ. ಸೃಷ್ಠಿ ಪೂರ್ವವು ದೇವರೇ ಮಾಯೆಯನ್ನು ರಚಿಸಿದವನಾಗಿರುವುದರಿಂದ ತನ್ನ ಶ್ಲೋಕದಲ್ಲಿ **"ಮಮಮಾಯಾ"** ನನ್ನ ಮಾಯೆ ಎಂದು ಹೇಳಿದ್ದಾನೆ. ದೇವರು ತಯಾರಿ ಮಾಡಿರುವ ಮಾಯೆ ದೇವರನ್ನು ಶರಣು ಬೇಡಿದಾಗ ತನ್ನ ಬಲವನ್ನು ತಗ್ಗಿಸುವನು. ಆದ್ದರಿಂದ "ಮಾ ಮಾಮೇವಯೇ ಪ್ರಪದ್ಯಂತೇ ಮಾಯಾ ಮೇತಾಂ ತರಂತಿತೇ" ಎಂದು ಹೇಳಿದ್ದಾನೆ. ಆದ್ದರಿಂದ ಮಾಯೆ ಬಲವನ್ನು ತಗ್ಗಿಸಿಕೊಳ್ಳುವುದಕ್ಕೆ ದೇವರನ್ನೇ ಬೇಡಿಕೊಳ್ಳಬೇಕು.

**ಪ್ರಶ್ನೆ :– ಇದಕ್ಕು ಮೊದಲು "ಆದಿತ್ಯ" ಗ್ರಂಥದಲ್ಲಿ "ದೈವಬೋಧನೆಗೆ ಸಂಕಲ್ಪ ದೇವರದ್ದು, ಕಾರ್ಯ ಆತ್ಮದ್ದು. ಹಾಗೆಯೇ ಧರ್ಮಗಳ ಬೋಧನೆಗೆ ಸಂಕಲ್ಪ ಮಾಯೆದು ಕೆಲಸ ಆತ್ಮದ್ದು" ಎಂದಿದ್ದಾರೆ. ಈಗ ಈ ಗ್ರಂಥದಲ್ಲಿ "ಧರ್ಮಗಳಿಗಾಗಲೀ, ಅಧರ್ಮಗಳಿಗಾಗಲೀ ಆತ್ಮವೇ ಕಾರಣವೆಂದು, ಆತ್ಮವೇ ಕಾರ್ಯಕರ್ತ ಎಂದು ಹೇಳುತ್ತಿದ್ದಾರೆ. ಇದಕ್ಕು ಮೊದಲು "ಆದಿತ್ಯ" ಗ್ರಂಥದಲ್ಲಿ 'ಸಂಕಲ್ಪ ದೇವರದ್ದು' ಎನ್ನುವುದನ್ನು, 'ಸಂಕಲ್ಪ ಮಾಯೆದು' ಎನ್ನುವುದನ್ನು ಹೇಗೆ ಅರ್ಥ ಮಾಡಿಕೊಳ್ಳಬೇಕು? ಸಂಪೂರ್ಣ ವಿವರ ತಿಳಿಸಬಲ್ಲರೆಂದು ಪ್ರಾರ್ಥಿಸುತ್ತಿದ್ದೇವೆ?**

**ಉತ್ತರ :–** ಈ ವಿಷಯಗಳಿಗೆ ಎಲ್ಲದಕ್ಕೂ ಮೊದಲೇ ಉತ್ತರ ಬಂದಿದೆ. ಅದು ನಿಮಗೆ ಅರ್ಥವಾಗಲಿಲ್ಲ ಆದಕಾರಣ ನೀವು ಪುನಃ ಕೇಳುವುದಾಗಿದೆ. ಈಗ ಪೂರ್ತಿ ವಿವರವಾಗಿ ಹೇಳುವೆನು ಕೇಳಿರಿ. "ಆದಿತ್ಯ" ಗ್ರಂಥದಲ್ಲಿ ದೈವಬೋಧನೆಗೆ ಸಂಕಲ್ಪ ದೇವರದು, ಅಧರ್ಮಗಳ ಬೋಧನೆಗೆ ಸಂಕಲ್ಪ ಮಾಯೆದು ಎಂದು ಹೇಳಿರುವ ಮಾತು ನಿಜವೇ. ಅಲ್ಲಿ ಹಾಗೆಯೇ ಹೇಳಬೇಕಾಗಿದೆ. ಆತ್ಮ ಎಲ್ಲ ಕೆಲಸಗಳು ಮಾಡುತ್ತಿದ್ದರೂ ಧರ್ಮಗಳಿಗೆ, ಅಧರ್ಮಗಳಿಗೆ ಸಂಕಲ್ಪ ಪ್ರೇರಣೆ ಮಾಡುವುದು ಆತ್ಮವೇ ಆದರೂ, ತನ್ನನ್ನು ಹೊರಗೆ ಹೇಳಿಕೊಳ್ಳದೇ ಇತರರ ಮೇಲೆ ಆ ಕೆಲಸವನ್ನು ಹೇಳುವುದು ಆತ್ಮಗೆ ಸಹಜ. ಆತ್ಮ ಮಾಡಿರುವ ಕೆಲಸವನ್ನು ತಾನು ಮಾಡಿದ್ದೇನೆ ಎಂದು ಹೇಳುವುದಿಲ್ಲ. ತನ್ನ ಇರುವಿಕೆಯನ್ನು ಹೊರಗೆ ಇಡುವುದಿಲ್ಲ. ಜ್ಞಾನ ಕೆಲಸಗಳನ್ನು ದೇವರ ಮೇಲೆ ತಳ್ಳುವುದು ಆತ್ಮಗೆ ಸಹಜವೇ. ಆದ್ದರಿಂದ ಸಂಕಲ್ಪ ಪ್ರೇರೇಪಣೆ ತಾನೇ ಮಾಡಿದ್ದರೂ ಒಳ್ಳೆಯದೇನೋ ದೇವರಮೇಲೆ, ಕೆಟ್ಟದೇನೋ ಮಾಯೆಮೇಲೆ ತಿರುಗಿಸಿ ಹೇಳಿರುವುದು ಆತ್ಮವೇ ಎಂದು ತಿಳಿಯಬೇಕು. ಈಗ ನಮಗೆ ಆತ್ಮ ವಿಷಯವು ತಿಳಿದಿದೆ ಆದಕಾರಣ ಹಿಂದಿರುಗಿ ವಿವರವನ್ನು ಕೇಳುತ್ತಿದ್ದೇವೆ. ಆತ್ಮ ವಿಷಯ ತಿಳಿಯದೇ ಹೋದರೇ ಆತ್ಮ ಹೇಳಿರುವುದೇ ನಂಬುತ್ತಿದ್ದೆವು. ಆಗ ನಿಜವಾಗಿ ಧರ್ಮವನ್ನು ದೇವರು , ಅಧರ್ಮಗಳನ್ನು ಮಾಯೆ ಸಂಕಲ್ಪಿಸಿದೆಯೆಂದು ಅಂದುಕೊಳ್ಳುತ್ತಿದ್ದೆವು. ಆತ್ಮ ವಿಷಯವು ತಿಳಿಯದವರೆಲ್ಲಾ ಹಾಗೆಯೇ ಅಂದುಕೊಳ್ಳುತ್ತಿದ್ದಾರೆ. ವಾಸ್ತವವಾಗಿ ಹೇಳಿದರೇ ಪ್ರತಿ ಕೆಲಸಕ್ಕೂ ಆತ್ಮವೇ ಪ್ರೇರೇಪಿಸಿ, ಪ್ರತಿಯೊಂದನ್ನು ಕಾರ್ಯಕರ್ತನಾಗಿ ಮಾಡುತ್ತಿದೆ.

**ಪ್ರಶ್ನೆ :– ಆತ್ಮಗೆ ವಿಶ್ರಾಂತಿ ಇರುವುದಿಲ್ಲವಾ? ವಿಶ್ರಾಂತಿ ಇಲ್ಲದೇ ಕೆಲಸ ಮಾಡುತ್ತದಾ?**

**ಉತ್ತರ :–** ಆತ್ಮ ಸರ್ವಕಾಲ, ಸರ್ವ ವೇಳೆಗಳಲ್ಲಿ ಎಚ್ಚರಿಕೆ ಹೊಂದಿದ್ದು, ವಿಶ್ರಾಂತಿ ಇಲ್ಲದೇ ಇದೆ. ಒಂದು ಕ್ಷಣವು ಸಹ ಸುಮ್ಮನಿರದೆ ಕರ್ಮ ಪರಿಪಾಲನೆ ಮಾಡುತ್ತಲೇ ಇದೆ.

**ಪ್ರಶ್ನೆ :– ಮನುಷ್ಯ ನಿದ್ರೆಹೋದಾಗ ನಿದ್ರೆಯಲ್ಲಿ ಜೀವಿಯು ಯಾವ ಕರ್ಮವನ್ನು ಅನುಭವಿಸುವುದಿಲ್ಲ ಅಲ್ಲವೇ! ನಿದ್ರೆಯಲ್ಲಿ ಆತ್ಮಗೆ ಕರ್ಮಪಾಲನೆ ಇಲ್ಲ ಅಲ್ಲವೇ! ಆಗ ವಿಶ್ರಾಂತಿ ತೆಗೆದುಕೊಳ್ಳುತ್ತದೆಯಾ?**

**ಉತ್ತರ :–** ಕರ್ಮಪಾಲನೆ ಎರಡು ವಿಧಗಳಾಗಿ ಇರುತ್ತದೆ. ಹೊರಗೆ ಅನುಭವಿಸುವ ಸುಖದುಃಖಗಳು, ಅಂತರಂಗದಲ್ಲಿ ಅನುಭವಿಸುವ ಸುಖ ದುಖಃಗಳು ಎಂದು ಎರಡು ವಿಧಗಳಿವೆ. ಹೊರಗಿನ ಅನುಭವಗಳು ಎಲ್ಲರಗೂ ತಿಳಿದಿರುವವೇ. ಒಳಗಿನ ಅನುಭವಗಳು ನಿದ್ರೆಯಲ್ಲಿ ಬರುವ ಸ್ವಪ್ನದಲ್ಲಿ ಉಂಟಾಗುವವು. ಸ್ವಪ್ನದಲ್ಲಿ ಸಹ ಆತ್ಮವಿದ್ದು ಜೀವಿಯನ್ನು ಅನುಭವಿಸುವಂತೆ ಮಾಡುತ್ತಿದೆ. ಈ ವಿಧವಾಗಿ ಬಿಡುವಿಲ್ಲದೇ ಆತ್ಮ ಕೆಲಸವನ್ನು ಮಾಡುತ್ತಿದೆ.

**ಪ್ರಶ್ನೆ :– ನಿದ್ರೆಯಲ್ಲಿ ಸ್ವಪ್ನವಿಲ್ಲದ ಸಮಯದಲ್ಲಿ ಆತ್ಮಗೆ ಕೆಲಸವಿಲ್ಲ ಅಲ್ಲವೆ! ಆಗ ಆತ್ಮಗೆ ವಿಶ್ರಾಂತಿಯೇ ಅಲ್ಲವೇ!**

**ಉತ್ತರ :–** ಶರೀರವನ್ನು ವಿಶ್ವವಿದ್ಯಾಲಯವೆಂದು ಹೇಳಿದ್ದೇವೆ ಅಲ್ಲವೇ! ಶರೀರವೆಲ್ಲದಕ್ಕೂ ಆತ್ಮವೇ ಅಧಿಕಾರಿ ಅಲ್ಲವೇ! ತನ್ನ ವಶದಲ್ಲಿರುವ ಶರೀರವನ್ನು ತಾನೇ ನೋಡಿಕೊಳ್ಳಬೇಕು. ಅದನ್ನು ಎಲ್ಲವೇಳೆಯಲ್ಲು ಬೋಧಿಸುವ ಬೋಧನಾಲಯವಾಗಿ ಇಟ್ಟುಕೊಳ್ಳಬೇಕು. ಶರೀರ ಜವಾಬ್ದಾರಿಯೆಲ್ಲಾ ಆತ್ಮದ್ದೇ ಆಗಿರುವುದರಿಂದ, ಜೀವಿಯು ನಿದ್ರೆಮಾಡುವ ಸಮಯದಲ್ಲಿ ಸಹ ಶ್ವಾಸಕೋಶ ವನ್ನು ಸಕ್ರಮವಾಗಿ ನಡೆಸುತ್ತಿರುತ್ತದೆ. ಜೀರ್ಣಾಶಯವನ್ನು ಕೂಡಾ ಆತ್ಮವೇ ಸಕ್ರಮವಾಗಿ ನಡೆಸುತ್ತಿರುತ್ತದೆ. ರಕ್ತಪ್ರಸಾರ ವಿಷಯದಲ್ಲಿ ಕೂಡಾ ಜಾಗೃತಿ ಯಾಗಿರುತ್ತದೆ. ಹೀಗೆ ಆತ್ಮ ನಿದ್ರೆ, ಎಚ್ಚರಿಕೆ, ಸ್ವಪ್ನಗಳಲ್ಲಿ ಸಹ ಕೆಲಸ ಮಾಡುತ್ತಿದೆ.

**ಪ್ರಶ್ನೆ :– ಆತ್ಮ ವಿಷಯಗಳಲ್ಲಿ ಬಹಳ ಆಳವಾಗಿ ನೀವು ಹೇಳುತ್ತಿದ್ದೀರ ಅಲ್ಲವೇ! ಆತ್ಮ ಶರೀರದಲ್ಲಿ ಅಡಗಿದ್ದು ಯಾರಿಗೂ ತಿಳಿಯದಿರುವುದಾಗಿ ಇದೆಯೆಂದು ಹೇಳಿದ್ದೀರ ಅಲ್ಲವೇ! ಅಡಗಿರುವ ಆತ್ಮವನ್ನು ನೀವು ಎಂದಾದರೂ ನೋಡಿದ್ದೀರಾ!**

**ಉತ್ತರ :–** ಆತ್ಮ ಯಾರಿಗೂ ತಿಳಿಯದೇ ಶರೀರದಲ್ಲಿ ಅಡಗಿರುವುದು ವಾಸ್ತವವೆ.

ಆದ್ದರಿಂದ ಅದು ಯಾರಿಗೂ ಕಾಣಿಸಲಿಲ್ಲ. ಅಷ್ಟೇಅಲ್ಲದೇ ಆತ್ಮ ಶರೀರದೊಳಗೆ ಇರುವುದರಿಂದ ಅದು ಯಾರಿಗೂ ಕಾಣಿಸದಂತಿದೆ. ಆತ್ಮ ಸ್ಥೂಲ ಆಕಾರ ವಿಲ್ಲದಿರುವುದು, ಸೂಕ್ಷ್ಮ ಆಕಾರ ಇರುವುದಾಗಿದೆ. ಸೂಕ್ಷ್ಮ ಆಕಾರವನ್ನು ನೋಡಬೇಕೆಂದರೇ ಜ್ಞಾನದೃಷ್ಠಿ ಅವಶ್ಯ. ಜ್ಞಾನದೃಷ್ಠಿ ಎಂದರೇ ಸೂಕ್ಷ್ಮವಾಗಿ ಇರುವವುಗಳನ್ನು ನೋಡಬಲ್ಲದು. ಸಾಧಾರಣ ಮನುಷ್ಯರು ಶರೀರದಲ್ಲಿ ಸೂಕ್ಷ್ಮವಾಗಿರುವ ಮನಸ್ಸು, ಬುದ್ಧಿಯನ್ನೇ ನೋಡಲಿಲ್ಲ. ಆ ಎರಡಕ್ಕಿಂತಲೂ ದೊಡ್ಡದಾದ ಆತ್ಮವನ್ನು ಹೇಗೆ ನೋಡಬಲ್ಲರು? ಮನೋಬುದ್ಧಿಯನ್ನು ನೋಡಲಾರದವರು ಆತ್ಮವನ್ನು ನೋಡಲಾರರು.

**ಪ್ರಶ್ನೆ :– ನೀವು ಮನೋಬುದ್ಧಿಯನ್ನು ನೋಡಿದ್ದೀರಾ? ನಿಮಗೆ ಜ್ಞಾನನೇತ್ರವಿದೆಯಾ?**

**ಉತ್ತರ :–** ಜ್ಞಾನನೇತ್ರವಿದೆಯೋ ಇಲ್ಲವೋ ನನಗೆ ಮಾತ್ರ ತಿಳಿದಿಲ್ಲ. ಆದರೇ ನಾನು ಮಾತ್ರ ಮನಸ್ಸನ್ನು ನೋಡಿದ್ದೇನೆ, ಬುದ್ಧಿಯನ್ನು ನೋಡಿದ್ದೇನೆ. ಮನಸ್ಸನ್ನು ಬುದ್ಧಿಯನ್ನೇ ಅಲ್ಲ ನೇರವಾಗಿ ಆತ್ಮವನ್ನೇ ನೋಡಿದ್ದೇನೆ. ಮನಸ್ಸನ್ನು, ಬುದ್ಧಿಯನ್ನು ನೋಡಬಲ್ಲ ಜ್ಞಾನದೃಷ್ಠಿ ಇರುವಾಗ ಆತ್ಮವನ್ನು ಕೂಡಾ ಸುಲಭವಾಗಿ ನೋಡಬಹುದು. ಆತ್ಮವನ್ನು ನೋಡಿದ್ದೇನೆ ಆದುದರಿಂದಲೇ ಆತ್ಮ ವಿವರವನ್ನು ಹೇಳುತ್ತಿದ್ದೇನೆ. ಆತ್ಮ ಪ್ರತ್ಯೇಕವಾಗಿ ಇದೆಯೆಂದು, ಪ್ರತ್ಯಕ್ಷವಾಗಿ ಇತರರಿಗೆ ಹೇಳಿರುವವನು ನಾನೇ ಎಂದು ಧೈರ್ಯವಾಗಿ ಹೇಳಬಲ್ಲೆನು. ಅಷ್ಟೇ ಅಲ್ಲದೆ ಆತ್ಮವನ್ನು ನೋಡಿದ ಮೊದಲನೆಯವನನ್ನು ನಾನೇ ಎಂದು ಸಹ ಧೈರ್ಯವಾಗಿ ಹೇಳುತ್ತಿದ್ದೇನೆ.

**ಪ್ರಶ್ನೆ :– ಭೂಮಿಮೇಲೆ ಎಷ್ಟೋ ಜನ ಸ್ವಾಮೀಜಿಗಳು, ಬಾಬಾಗಳು, ಗುರುಗಳು, ಪೀಠಾಧಿಪತಿಗಳು, ಮಠಾಧಿಪತಿಗಳು, ಸನ್ಯಾಸಿಗಳು, ತಪಸ್ವಿಕರು, ಯೋಗಿಗಳು ಇದ್ದಾರೆ ಅಲ್ಲವೇ! ಅವರು ಯಾರೂ ನೋಡದ ಆತ್ಮವನ್ನು ನೀವು ನೋಡಿದ್ದೀರಾ?**

**ಉತ್ತರ :–** ಯಾರ ಕಥೆ ನನಗೆ ತಿಳಿದಿಲ್ಲ. ನಾನು ಆತ್ಮವನ್ನು ಈಗಲೇ ಅಲ್ಲ ಯಾವಾಗಲೋ ಕೆಲವು ಹತ್ತು ವರ್ಷಗಳ ಕೆಳಗೆಯೇ ನೋಡಿದ್ದೇನೆ. ನಾನು

ಒಬ್ಬನೇ ನೋಡಿದ್ದೇನೆ ಎಂದು ಸಹ ಹೇಳುತ್ತಿದ್ದೇನೆ. ನೀವು ಹೇಳಿರುವ ಉಳಿದವರಿಗೆ ಆತ್ಮವೊಂದರ ವಾಸನೆ ಕೂಡಾ ತಿಳಿದಿಲ್ಲ. ಹಾಗಿರುವಾಗ ಅವರು ಆ ದೃಶ್ಯವನ್ನು ಹೇಗೆ ನೋಡಬಲ್ಲರು?

**ಪ್ರಶ್ನೆ :– ನೀವು ಆತ್ಮವನ್ನು ನೋಡಿದ್ದೇನೆ ಎನ್ನುವುದೇ ಅಲ್ಲದೇ ಮನೋ ಬುದ್ಧಿಯನ್ನು ಕೂಡಾ ನೋಡಿದ್ದೇನೆ ಎಂದು ಹೇಳುತ್ತಿದ್ದೀರ. ಅದು ಗರ್ವದಿಂದ, ಅಹಂನಿಂದ ದುರಹಂಕಾರದಿಂದ ಹೇಳುವಮಾತಾಗಿ ನಾವು ಅಂದುಕೊಳ್ಳಬಹುದು ಅಲ್ಲವೇ!**

**ಉತ್ತರ :–** ನನ್ನ ಮಾತು ಅಸತ್ಯವಾದರೇ ನಿಮ್ಮ ಮಾತಿಗೆ ಪ್ರಾಣವಿರುವಹಾಗೆ. ನನ್ನ ಮಾತು ಸತ್ಯವಾದರೇ ನಿಮ್ಮ ಮಾತಿಗೆ ಪ್ರಾಣವೇ ಇಲ್ಲದಹಾಗೆ. ನನಗೆ ತಿಳಿದು ನೀವು ಪ್ರಾಣವಿಲ್ಲದ ಮಾತನ್ನು ಮಾತನಾಡುತ್ತಿದ್ದೀರ. ನನ್ನೊಂದರ ಬಾಹ್ಯರಂಗ ಮೂಗು ಮುಖವನ್ನು ನೋಡುತ್ತಿದ್ದೀರ ಹೊರತು, ನನ್ನ ಅಂತರಂಗದಲ್ಲಿನ ರೂಪವನ್ನು ನೀವು ನೋಡುತ್ತಿಲ್ಲ. ಮನೋಬುದ್ಧಿಯನ್ನು ನೋಡಿದ್ದೇನೆ ಎಂದು ಧೈರ್ಯವಾಗಿ ಹೇಳುತ್ತಿದ್ದೇನೆ, ಅಷ್ಟೇ ಅಲ್ಲದೆ ನಾನು ಹೊರತು ಯಾರೂ ನೋಡಲಿಲ್ಲವೆಂದು ಸಹ ಹೇಳುತ್ತಿದ್ದೇನೆ. ಮನೋ ಬುದ್ಧಿಯನ್ನೇ ಅಲ್ಲದೇ ನೇರವಾಗಿ ಆತ್ಮವನ್ನೇ ನೋಡಿದ್ದೇನೆ ಎಂದು ಹೇಳುತ್ತಿದ್ದೇನೆ. ಆದರೇ ನೀವು ವಿಶ್ವಾಶಿಸುತ್ತಿಲ್ಲ. ನಾನು ದೇವರನ್ನು ಮಾತ್ರ ನೋಡಲಿಲ್ಲ. ನಾನು ಎಂದಿಗೂ ದೇವರನ್ನು ನೋಡುವುದಿಲ್ಲ, ನೋಡಬೇಕಾದ ಅಗತ್ಯ ನನಗಿಲ್ಲ. ಇದಕ್ಕಿಂತಲೂ ಹೆಚ್ಚಾಗಿ ನಿಮ್ಮೊಂದಿಗೆ ಏನೂ ಹೇಳುವುದಿಲ್ಲ.

ಇಂತಿ

**ಯೋಗೀಶ್ವರ್**

**ಅಸತ್ಯವನ್ನು ಸಾವಿರ ಜನ ಹೇಳಿದರೂ, ಅದು ಸತ್ಯವಲ್ಲ.**
**ಸತ್ಯವನ್ನು ಸಾವಿರ ಮಂದಿ ಅಲ್ಲವೆಂದರೂ, ಅದು ಅಸತ್ಯವಲ್ಲ.**

1. ನಾಲ್ಕು ಅಧರ್ಮಗಳು ಶೇ. ಹತ್ತರಷ್ಟು ಮನುಷ್ಯರಲ್ಲಿರುವಾಗ, ಒಂದು ಮತವೆಂಬ ಅಧರ್ಮ 99 ರಷ್ಟು ಇದೆ.

2. ಯಜ್ಞ, ದಾನ, ವೇದ, ತಪಸ್ಸುಗಳು ನಾಲ್ಕು ಆದಾಗ, ಐದನೆಯ ಅಧರ್ಮ ಮತ.

3. ದೈವ ಮಾರ್ಗಕ್ಕೆ ದೊಡ್ಡ ಆತಂಕ ಮತ.

4. ಎಲ್ಲ ಅಧರ್ಮಗಳನ್ನು ಮೀರಿರುವುದು ಮತವೆಂಬ ಅಧರ್ಮ.

5. ಪ್ರಪಂಚ ಮಾರ್ಗದಲ್ಲಿ ಮತವಿದ್ದರೇ ದೈವ ಮಾರ್ಗದಲ್ಲಿ ಹತವಾಗಿ ಹೋಗುತ್ತೀಯ.

6. ಕಲಿಯುಗದಲ್ಲಿ ಹೊಸದಾಗಿ ಹುಟ್ಟಿ ಬಂದಿರುವ ಐದನೆಯ ಅಧರ್ಮವೇ ಮತ.

ಮತಗಳು ನಿಷೇಧ, ನಿಷಿದ್ಧ. ಕುಲಗಳು ಅಹೇತುಕ, ಅಶಾಸ್ತ್ರೀಯ.

ಭಗವದ್ಗೀತಾ, ಬೈಬಲ್, ಖುರಾನ್ ಮೂರೂ ಒಂದೇ ದೈವಗ್ರಂಥಗಳಲ್ಲಿನ ಭಾಗಗಳೇ.

ನಿಮ್ಮ ಮನೋಭಾವನೆಗಳು ಕುಲಮತಗಳಿಗೆ ಅತೀತವಾದರೇ ಕೂಡಲೇ "ಪ್ರಬೋಧ ಸೇವಾಸಮಿತಿ" ಯಲ್ಲಿ ಸದಸ್ಯರಾಗಿ ಸೇರಿರಿ. ದೇವರು ನಿಮ್ಮನ್ನು ಜ್ಞಾನಿಗಳಾಗಿ ಮಾಡಬೇಕೆಂದು ಕೋರುತ್ತಿರುವ

--ಶ್ರೀಶ್ರೀಶ್ರೀ ಆಚಾರ್ಯ ಪ್ರಬೋಧಾನಂದ ಯೋಗೀಶ್ವರರು

**Cell:09705864675, 09440556968, 09611133635**

# Vishwa Vidyalayam



ಮೊದಲಿನ ಪ್ರಬೋಧಾನಂದ ಯೋಗೀಶ್ವರರು


Author :

The Only GURU of Three Religions

The Spiritual Emperor, Thraitha Theorem Originator

**Sri Acharya Prabodhananda Yogeeshwarulu**



www.thraithashakam.org